# ಮಾನಸಿ

ಫೆಬ್ರವರಿ 2005 ತಿಂಗಳ ಪತ್ರಿಕೆ

**ಮಾನಸ** ತಿಂಗಳ ಪತ್ರಿಕೆ ಫೆಬ್ರವರಿ 2005

ಸಂಪುಟ : 20 ಸಂಚಿಕೆ : 2



**ವಿಳಾಸ :**

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ - ಪೋಸ್ಟ್
ಬೆಂಗಳೂರು - 560 067

**ಸೂಚನೆ :** ಸೂಚನೆ : ಬಿಡಿಪ್ರತಿ 10-00 ರೂ.
ವಾರ್ಷಿಕ ಚಂದಾ 100-00 ರೂ.
ಸಂಸ್ಥೆಗಳಿಗೆ 150-00 ರೂ.

* ಒಂದು ವಿಶೇಷಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು

## ಈ ಸಂಚಿಕೆಯಲ್ಲಿ.....



**ಮೈಸೂರು**

ಮೈಸೂರಿನಲ್ಲಿ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ
**ವೆಂ.ವನಜ :** 2329, 12ನೇ ಮೇನ್, 2ನೇ ಹಂತ ವಿಜಯನಗರ, ಮೈಸೂರು - 570 017

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ-ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ರುದ್ರಭೀಕರ ಸುನಾಮಿ ಅಲೆ ಲಕ್ಷಾಂತರ ಜನರನ್ನು ಬಲಿತೆಗೆದು ಕೊಂಡಿದೆ. ಸುನಾಮಿಯ ದೈತ್ಯ ಅಲೆಗಳು ತಣ್ಣಗಾಗಿದ್ದರೂ ಏಷ್ಯಾ ಖಂಡದ ಹಲವಾರು ದೇಶಗಳ ಜನರ ರೋದನ, ನೋವು, ಹತಾಷೆಯ ದನಿ ಒಡಲೊಳೊಗೆ ಕುದಿಯುತ್ತಿದೆ. ಮನೆ, ಮಾರು, ಬಂದು ಬಳಗದವರನ್ನೂ ಕಳೆದು ಕೊಂಡವರ ನಿಟ್ಟುಸಿರು ಕಡಲ ಮೊರತದೊಂದಿಗೆ ಪ್ರತಿ ಧ್ವನಿಸುತ್ತದೆ.

ಸುನಾಮಿಯಂತಹ ದುರಂತದ ಮನ್ಸೂಚನೆ ಪಡೆಯಲಾಗದ ಸ್ಥಿತಿ ನಮ್ಮ ದೇಶದ ವೈಜ್ಞಾನಿಕ ವಿಫಲತೆಯನ್ನು ಎತ್ತಿ ತೋರಿಸುತ್ತದೆ. ಅಪಾರ ವೆಚ್ಚದ ಕಾರಣ ತೋರಿಸಿ ಮುನ್ಸೂಚನೆ ನೀಡುವಂತಹ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲು ಅಂತರ ರಾಷ್ಟ್ರೀಯ ಸಮುದಾಯದ ಜೊತೆ ಸೇರದಿರುವುದು ನಮ್ಮ ದೇಶದ ನೈಸರ್ಗಿಕ ವಿಪತ್ತು ನಿರ್ವಹಣೆಯ ಬಗೆಗಿರುವ ಕನಿಷ್ಟ ಕಾಳಜಿಯನ್ನು ಎತ್ತಿ ತೋರಿಸುತ್ತದೆ. ಭಾರತೀಯ ಬಾಹ್ಯಾಕಾಶ ಸಂಶೋಧನಾ ಕೇಂದ್ರದ ಅಧ್ಯಕ್ಷ ಶ್ರೀ ಮಾದವನ್ ನಾಯರ್ ಲಭ್ಯವಿರುವ ಅತ್ಯಾಧುನಿಕ ತಂತ್ರಜ್ಞಾನವನ್ನು ಬಳಸಿಕೊಂಡರೂ ಸುನಾಮಿಯ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಪಡೆಯುವುದು ಅಸಾಧ್ಯ ಎಂಬ ಹೇಳಿಕೆ ಇನ್ನಷ್ಟು ಗಾಬರಿ ಹಾಗೂ ಆತಂಕವನ್ನು ಹುಟ್ಟು ಹಾಕುತ್ತದೆ. ಸುನಾಮಿಯಂತಹ ನೈಸರ್ಗಿಕ ವಿಪತ್ತನ್ನು ಕುರಿತು ವೈಜ್ಞಾನಿಕ ಮಾಹಿತಿಯ ಕೊರತೆ, ಮುನ್ಸುಚನೆಯನ್ನು ಪಡೆಯುವಲ್ಲಿ ತಾಂತ್ರಿಕ ಅಭಿವೃದ್ಧಿಯ ಕೊರತೆ ನಮ್ಮ ಸರ್ಕಾರಗಳ 'ಅಭಿವೃದ್ಧಿ' ವ್ಯಾಖ್ಯಾನವನ್ನು ಪ್ರಶ್ನಿಸಬೇಕಾಗುತ್ತದೆ.

ಇತರ ಕ್ಷೇತ್ರಗಳನ್ನು ನಿರ್ಲಕ್ಷಿಸಿ ಯುದ್ಧ ಸಾಮಗ್ರಿಗಳಿಗಾಗಿ, ಅಣುಶಕ್ತಿಬಾಂಬ್‌ಗಾಗಿ ಸರ್ಕಾರ ಅಗತ್ಯಕ್ಕಿಂತ ಹೆಚ್ಚು ಹಣವನ್ನು ಮೀಸಲಿಡುತ್ತದೆ. ಜನಮುಖಿಯಾಗದ ಅಭಿವೃದ್ಧಿ ಯಾರಿಗಾಗಿ ?

ನೈಸರ್ಗಿಕ ರಾಷ್ಟ್ರೀಯ ದುರಂತಕ್ಕೆ ಜನರು ಪ್ರತಿಕ್ರಿಯೆ ತೋರಿಸುತ್ತಿರುವ ರೀತಿ ಹೃದಯಸ್ಪರ್ಶಯಾಗಿದೆ. ಇದು ಜನರ ಹೃದಯದಲ್ಲಿ ತಣ್ಣಗೆ ಉರಿಯುತ್ತಿರುವ ಮಾನವೀಯತೆಯೆ ಎಣ್ಣೆ ದೀಪದಂತಿದೆ. ಎಲ್ಲ ಬೇಧಭಾವವನ್ನು ಮರೆತು ಮಾನವೀಯತೆಯ ಜೋಗಳವ ಹಾಡಿದೆ. ನಾಗೋರ್ ಜಿಲ್ಲೆಯ ಜನಪ್ರಿಯ ದರ್ಗ ಹಿಂದೂ-ಮುಸ್ಲಿಂ, ಕ್ರೈಸ್ತ ಯಾವ ಭೇಧಭಾವವಿಲ್ಲದೇ ಶವಸಂಸ್ಕಾರ ಮಾಡಿರುವುದು, ಹಾಗೂ ಬದುಕುಳಿದವರಿಗೆ ಆಶ್ರಯ ನೀಡಿರುವುದು ಮಾನವೀಯತೆಗೆ ಹಿಡಿದ ಕನ್ನಡಿಯಾಗಿದೆ. ಆದರೆ ಈ ಪರಿಹಾರ ಹಾಗೂ ಕಾರ್ಯಗಳು ನೊಂದಿರುವ ಜನರಿಗೆ ಕಣ್ಣೊರೆಸುವ ಹಂತದಿಂದ ಶಾಶ್ವತ ಪರಿಹಾರ ಕಾರ್ಯಗಳಲ್ಲಿ ಕೊನೆಗೊಳ್ಳಬೇಕಾಗಿದೆ.

ಮೀನುಗಾರರ ಕುಟುಂಬಗಳು ನೆಲೆ ತಪ್ಪಿವೆ. ಮೀನುಗಾರಿಕೆಯಾನ್ನು ಬಿಟ್ಟು ಬದುಕಲಾರದ ಅವರ ಬದುಕಿಗೆ ಅದೇ ನಿಟ್ಟಿನಲ್ಲಿ ನೆರವಾಗಬೇಕಾಗಿದೆ. ಸರ್ಕಾರ ಈ ನಿಟ್ಟಿನಲ್ಲಿ ಗಂಭೀರವಾಗಿ ಯೋಚಿಸಿ ಯೋಜನೆಗಳನ್ನು ಹಮ್ಮಿಕೊಳ್ಳಬೇಕಾಗಿದೆ. ಅವರಿಗೆ ಅಗತ್ಯವಾದ ಬಲೆ, ದೋಣಿ, ಮೀನು ಮಾರಾಟ ವ್ಯವಸ್ಥೆ, ಕಸಬು ಮುನ್ನಡೆಸಲು ಅಗತ್ಯವಾದ ಸೌಕರ್ಯ ಮುಂತಾದವುಗಳ ಕಡೆ ಹೆಚ್ಚು ಗಮನ ನೀಡಬೇಕಾಗುತ್ತದೆ.

ಪುನರ್ವಸತಿ ಕೇಂದ್ರಗಳಲ್ಲಿ ಮಹಿಳೆಯರಿಗೆ ವಿಶೇಷವಾದ ಗಮನವನ್ನು ನೀಡಬೇಕಾಗುತ್ತದೆ. ಮಹಿಳೆಯರಿಗೆ ಶೌಚಾಲಯ ವ್ಯವಸ್ಥೆ, ಬಟ್ಟೆ ಬದಲಾಯಿಸಲು ಪ್ರತ್ಯೇಕ ಸ್ಥಳ ಮುಂತಾದ ಸಮಸ್ಯೆಗಳನ್ನು ಮಹಿಳೆಯರು ಎದುರಿಸುತ್ತಿದ್ದಾರೆ. ಹೆಣ್ಣು ಮಕ್ಕಳ ಮೇಲೆ ಲೈಂಗಿಕ ಶೋಷಣೆ ನಡೆದಿರುವ ಘಟನೆಗಳೂ ಸಹ ವರದಿಯಾಗಿವೆ. ಮಕ್ಕಳ ಕಳ್ಳಸಾಗಾಣಿಕೆ, ಬಾಲಕಾರ್ಮಿಕರನ್ನು ಬಳಸಿಕೊಳ್ಳುವ ಪ್ರಯತ್ನಗಳೂ ಸಹ ನಡೆಯುತ್ತಿವೆ. ಪರಿಹಾರವೆಂದರೆ ಊಟ, ವಸತಿಯಷ್ಟೇ ಅಲ್ಲದೇ, ಮಹಿಳೆಯರ, ಮಕ್ಕಳ ಸೂಕ್ತ ರಕ್ಷಣೆಯ ಜವಾಬ್ದಾರಿಯನ್ನು ಅದರಲ್ಲಿ ಸೇರಿಸಬೇಕಾಗಿದೆ.

ಶ್ರೀಲಂಕ, ಮಲೇಶಿಯ, ಬಾಂಗ್ಲಾದೇಶ, ಮಾಲ್ಡೀವ್ಸ್, ಸೋಮಾಲಿಯ, ಮಯನ್ಮಾರ್ ದೈತ್ಯ ಕಡಲ ಅಲೆಗಳಿಗೆ ಒಳಗಾಗಿದೆ. ಈ ದೇಶಗಳಿಗೆ ಭಾರತ ಸ್ಪಂದಿಸಿದ ರೀತಿ, ಹಾಗೂ ರಾಷ್ಟ್ರೀಯ ದುರಂತವನ್ನು ಎದುರಿಸುವಲ್ಲಿ ಭಾರತಕ್ಕಿರುವ ಸ್ವಾಭಿಮಾನದ ನಿಲುವು ಸ್ವಾಗತಾರ್ಹ. ಅಮೇರಿಕದಂತಹ ಸಾಮ್ರಾಜ್ಯಶಾಹಿ ನೀತಿ ಧೋರಣೆಗೆ ಭಾರತದ ಈ ನಿಲುವು ಒಂದು ದೊಡ್ಡ ಸವಾಲು. ಹಾಗಾಗಿಯೇ ಅಮೇರಿಕ ತಾನು ನೀಡುವ ಪರಿಹಾರ ಮೊತ್ತದ ಹಣದಲ್ಲಿ ಬದಲಾವಣೆಯನ್ನು ಮಾಡಿರುವುದು

ವಿಪತ್ತು ನಿರ್ವಹಣೆಗಾಗಿ ಕೇಂದ್ರ ಸರ್ಕಾರ ನಿಗಮ ಸ್ಥಾಪಿಸಿರುವುದು ಸ್ವಾಗತಾರ್ಹವಾದರೂ, ಅಧಿಕಾರ ಶಾಹಿ, ಬ್ರಷ್ಟಾಚಾರ ಇವುಗಳ ಕಾರ್ಯ ವೈಖರಿಯಲ್ಲಿ ಬೇರು ಬಿಡದಂತೆ ಕಾರ್ಯ ನಿರ್ವಹಿಸಬೇಕಾಗಿದೆ.

# ಗೌರಿ ಶಾಲೆಗೆ ಹೋದಳು

- ಯವ್ವಾ ಯವ್ವಾ ಇಂದ ನಾ... ಸಾಲೆಗೆ ಹೋಕ್ಕೇನೀ.....
- ಹೋಕ್ಕೀಯಂತೆ.... ಮದಲ ಅಂಗಳಾ ಗುಡಸು, ಸಗಣಿ ಹಚ್ಚು, ರಂಗೋಲೆ ಬಿಡು ಮತ್ತ......
- ಯವ್ವಾ ಯವ್ವಾ ಇಂದ ನಾ... ಸಾಲೆಗೆ ಹೋಕ್ಕೇನೀ....
- ಹೋಕ್ಕೀಯಂತೆ ಮದಲ ಭೂವಿಗೂ, ದ್ಯಾವಿಗೂ ತೆನೆ ಮುರ್ದು ಸೊಪ್ಪಾಕು ನಡೀ ಮತ್ತ.....
- ಯವ್ವಾ ಯವ್ವಾ ಇಂದ ನಾ..... ಸಾಲೆಗೆ ಹೋಕ್ಕೇನೀ....
- ನೀರು ಬಂದಾವೇನ ನೋಡ ಮತ್ತ....
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ....
- ಯಾಕ.... ಇನ್ನ ಬಸ್ಯಾ ಎದ್ದಾಂಗಿಲ್ಲಾ.... ಪಾಟೀ ಬಳಪಾ ಹ್ಯಾಂಗ ಒಗದಾನ... ಒಟ್ಟ ಜವಾಬದಾರೀ ಅನ್ನೂದ ಇದ್ದಾಂಗಿಲ್ಲ... ಸಾಲೆಗೆ ತಡಾ ಆಗ್ತೈತೀ.... ಎಬ್ಬಿಸ ಮತ್ತ....
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ....
- ಅಪ್ಪಗ ಚಾ ಕೊಡು.... ಲಗೂನ.....
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ....
- ದನಿ ಶಾರೂದ ಇದ್ದಾಂಗದ..... ಅಳ್ತಾಳೇನ.... ನೋಡವ್ವ ಮತ್ತ.... ಉಚ್ಚೆ ಮಾಡ್ಯೆತೋ ಏನೋ.....
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇ ನೀ....
- ಕಾಯಿಪಲ್ಲ ಎಷ್ಟ ಚಲೋದದ....ಸೊಪ್ಪ ಬಿಡಸು.... ರೊಟ್ಟಿ ಬಡಿಯುವಂತೀ.....
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ....
- ಯಾಕೊ ಒಲಿ ಉರಿಲೊಲ್ಲದು... ಬಾಟಲದಾಗ ಚಿಮಣಿ ಎಣ್ಣೆ ಅದಾವೇನ ನೋಡ ಮತ್ತ....
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನಿ...
- ಬಸ್ಯಾಗ ರೊಟ್ಟಿ ನೀಡು.... ಸಾವಾಕಾಶ ಉಣ್ಣಲಿ....
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ...
- ಅದ್ಯಾಕ ಸಾಲೆ ಸಾಲೆ ಅಂತ ಒದರಲಿಕ್ಕಹತ್ತೀ.... ಅಪ್ಪಗ ಬುತ್ತಿ ಒಯ್ಯಬೇಕ.... ನೆಪ್ಪಿಲ್ಲೇನು ?
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ...
- ಲಗೂನ ಬುತ್ತಿಕೊಟ್ಟು ಸರ್‍ರಂತ ಹೊಳ್ಳಿ ಬಾ... ಹಿಟ್ಟು ಬೀಸಾಸಕ ಗಿರಣಿಯತ್ರ ಹೋಗಬೇಕ ತಿಳಿತೇನ ?
- ಜಮುನಾ, ಕಮಲಾ, ಗಂಗಾ, ಎಲ್ಲಾ ಸಾಲೆಗೆ ಹೊಂಟಾರ.....
- ಅವರ ಅಪ್ಪಗೋಳು ಸರಕಾರದಾಗ ಸಾಹೇಬರ ಅದಾರ... ಸಾಲೆಗೂ ಹೋಕ್ಕಾರ, ಸಗ್ಗಕ್ಕೂ ಹೋಕ್ಕಾರ... ಪುಣ್ಣೆವಂತ ಮಂದಿ... ನಿನಗೇನೈತಿ ?
- ಯವ್ವಾ ಯವ್ವಾ ಇಂದ ನಾ ಸಾಲೆಗೆ ಹೋಕ್ಕೇನೀ.....
- ಮತ್ತ... ಮತ್ತ... ಅದೇ ಮಾತ ? ತಲೆ ಕೆಟ್ಟಾವೇನಾ ?
- ನೀ ಯಾಕ ನನಗ ಸಾಲೆಗೆ ಕಳಿಸಾಂಗಿಲ್ಲಾ ಹೇಳ ಮತ್ತ...
- ಸುಮ್ಮ ಕೂಡು... ಯಾಕ ಕಾಡಸ್ತೀ....
- ಬಸ್ಯಾ ಯಾಕ ಸಾಲೆಗೆ ಹೋಕ್ಕಾವ ಹೇಳ ಮತ್ತ....
- ಬಸ್ಯಾ ಗಂಡು ಮಗಾ, ಇದ್ಯಾ ಬುದ್ಯಾ ಕಲ್ತು ದೊಡ್ಡ ಮನಶ್ಯಾ ಆಗೋದು ಬ್ಯಾಡೇನ.... ??
- ಹಂಗಾರ ನನಗ ಇದ್ಯಾ, ಬುದ್ಯಾ ಬ್ಯಾಡೇನ ? ನಾ ಮನಶ್ಯಾ ಆಗೋದು ಬ್ಯಾಡೇನ ? ನಾಯೇನ... ಕಸ, ಕಡ್ಡಿ ಕಲ್ಲೇನ ? ನೀ... ನನ್ನ ಖರೇ ಅಲ್ವಾ... ಹೌದಲ್ಲೋ .... ಹೇಳ ಮತ್ತ....
- ಏ... ಅದ್ಯಾಕ ಹುಚ್ಚುಚ್ಚಾರ ಮಾತಾಡಕಹತ್ತೀ...ಸಾಕಾಗೈತಿ ನನಗ...ನಾ ಒಬ್ಯಾಕಿ... ರಗಡ ಕೆಲ್ಸ ಬಿದ್ದಾವ... ನನ ಕೈಯಲಿ ಹರಿತಾವೇನ ?
- ನನಗ ಇಂದ ಸಾಲೆಗೆ ಕಳಿಸು ಮತ್ತ.... ಬಿಡು... ನಾ ಒಬ್ಬಾಕಿನೇ... ಹೋಕ್ಕೇನೀ... ನಂಗೇನ ಸಾಲಿ ಹಾದಿ ತಿಳಿವೋಲ್ದೇನು ?
- ಏ... ನೋಡ... ಮತ್ತ... ಒಬ್ಬಳೇ.... ಹೋಕ್ಕೀಯಾ ? ಏ... ಹುಚ್ಚುಖೋಡಿ....
- ನಾ... ಹೋಕ್ಕೇನೀ...ನಾ... ಹೋಕ್ಕೇನಿ.... ನಾ...ಹೋಕ್ಕೇನೀ... ನಾ ಯಾರಿಗೂ ಹೆದರಾಂಗಿಲ್ಲ.... ಇದ... ನಾ ಹೊಂಟೆ...
- ನಿಂದ್ರು... ಗೌರಾ... ನಿಂದ್ರು....
- ಯಾಕ ? ಇನ್ನೂ ಮಾರ ಕೆಲ್ಸ ಅದಾವೇನು ?
- ರೊಟ್ಟಿ ಕಟಗೊಂಡು ಹೋಗು ಮಗಳಾ... ಬೆಳಗ್ಯಾನ... ನೀಯೇನ ಉಂಡೇ ಇಲ್ಲಾ....

**- ಸವಿತಾ ನಾಗಭೂಷಣ**

# ಮಾನವ ಹಕ್ಕುಗಳು : ಮಹಿಳಾ ಹಕ್ಕುಗಳು

- ಎಂ.ರಂಗಸ್ವಾಮಿ

ಮಾನವನ ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆಗಾಗಿ ಹಕ್ಕುಗಳು ಅತ್ಯವಶ್ಯಕ. ಹಕ್ಕುಗಳಿಲ್ಲದ ಮನುಷ್ಯ ಗುಲಾಮನಿಗೆ ಸಮಾನ. ಹಕ್ಕುಗಳು ಅಧಿಕಾರದಲ್ಲಿರುವವರ ಹತೋಟಿಯಿಂದ ಮುಕ್ತವಾಗಿರಬೇಕು. ಈ ಹಕ್ಕುಗಳನ್ನು ಅಲ್ಲಗಳೆಯುವ ಕೆಲವು ವ್ಯತ್ಯಾಸಗಳನ್ನು ಗುರುತಿಸಲು ಪ್ರಯತ್ನಿಸುವುದು ಈ ಪ್ರಬಂಧದ ಉದ್ದೇಶವಾಗಿದೆ.

ಮಹಿಳಾ ಹಕ್ಕುಗಳನ್ನು ಮಾನವ ಹಕ್ಕುಗಳಿಂದ ಪ್ರತ್ಯೇಕವಾಗಿ ಬೇರ್ಪಡಿಸಿ ಮಾತಾಡುವುದು ಸತ್ಯವಿಲ್ಲದ್ದು ಎಂದು ಒಂದು ಪಕ್ಷದವರು ಹೇಳುತ್ತಾರೆ. ಮಾನವ ಹಕ್ಕುಗಳೆಂದರೇನು ಎಂದು ಚರ್ಚೆಮಾಡುವಾಗ ಆ ಹಕ್ಕುಗಳನ್ನು ಮಹಿಳೆಯರಿಗೆ ಸಂಪೂರ್ಣವಾಗಿ ಕೊಡಲಾಗಿದೆಯೇ ಎಂಬ ಪ್ರಶ್ನೆ ಸಹಜವಾಗಿ ನಮ್ಮಲ್ಲಿ ಉದ್ಭವವಾಗುತ್ತದೆ. ಪುರುಷಪ್ರಧಾನ ಸಮಾಜದಲ್ಲಿ ಹಿಂದಿನಿಂದಲೂ ಶೋಷಣೆಗೆ ಒಳಗಾಗುತ್ತಾ ಬಂದಿರುವ ಹೆಣ್ಣಿಗೆ ಮಾನವೀಯ ಹಕ್ಕುಗಳು ಪೂರ್ತಿಯಾಗಿ ಸಿಗುವುದಕ್ಕೆ ಅವಕಾಶಗಳು ಕಡಿಮೆ. ಕೆಲವು ದೇಶಗಳಲ್ಲಿರುವ ಮಹಿಳೆಯರು ಮಾನವೀಯ ಹಕ್ಕುಗಳನ್ನು ಪಡೆಯುವಲ್ಲಿ ವಿಫಲರಾಗಿರುವುದಕ್ಕೇ ಬಹಳ ಹಿಂದುಳಿದ ನೆಲೆಯಲ್ಲಿರುವುದೇ ಕಾರಣ - ಎಂದು ಅಂತರ್ ರಾಷ್ಟ್ರೀಯ ಮಹಿಳಾ ದಿನಾಚರಣೆಯ ಸಂದರ್ಭಗಳಲ್ಲಿ ಪ್ರಸಾರವಾಗಿರುವ ಮಾಹಿತಿಗಳು ನಂಬಲರ್ಹವಾಗಿವೆ.

> "ಮಾನವ ಹಕ್ಕುಗಳು ಎನ್ನುವುದು ಆಧುನಿಕ ಶಬ್ದ. ಆದರೆ ಅದು ಧ್ವನಿಸುವ ತತ್ವ ಮಾನವತೆಯಷ್ಟೇ ಹಳೆಯದು ಅದರರ್ಥ, ಕೆಲವು ಹಕ್ಕುಗಳು ಮತ್ತು ಸ್ವಾತಂತ್ರ್ಯಗಳು ಮಾನವ ಅಸ್ತಿತ್ವಕ್ಕೆ ಮೂಲಭೂತವಾದವು. ಅವು ಯಾವನೋ ಒಬ್ಬ ಆಳುವವ ಅಥವಾ ಸರಕಾರ ಮನಬಂದಂತೆ ಕೊಡುವ ಉಡುಗೊರೆಗಳಲ್ಲ. ಅವುಗಳನ್ನು ಯಾವುದೋ ಅವ್ಯವಸ್ಥಿತ ಶಕ್ತಿ ಕಿತ್ತುಕೊಳ್ಳಲಾಗುವುದಲ್ಲ."
>
> - ಇಂಡೊ - ಬ್ರಿಟಿಷ್ ಟ್ರೈನಿಂಗ್ ಪ್ರಾಜೆಕ್ಟ್ ಆನ್ ಹ್ಯೂಮನ್ ರೈಟ್ಸ್ ಅಂಡ್ ಪ್ರಿಸನ್ ಮೇನೇಜ್‌ಮೆಂಟ್, 1999

ಪ್ರಪಂಚ ರೂಪುಗೊಂಡಾಗಿ ನಿಂದಲೂ ಮಹಿಳೆಯರಿಗೆ ಹಕ್ಕುಗಳನ್ನು ನೀಡಿರಲಿಲ್ಲ ಎಂದು ಪರಿಗಣಿಸಲು ಸಾಧ್ಯವಿಲ್ಲ. ಒಂದು ಕಾಲ ಘಟ್ಟದಲ್ಲಿ ಆಫ್ರಿಕಾದ ಮಹಿಳೆಯರ-ನ್ನೊಳಗೊಂಡಂತೆ ಎಗಿಬ್ಟ್ ಮುಂತಾದ ಕೆಲವು ದೇಶಗಳಲ್ಲಿ ಮಹಿಳೆಯರಿಗೆ ಸಂಪೂರ್ಣವಾಗಿ ಹಕ್ಕುಗಳನ್ನು ನೀಡಲಾಗಿತ್ತು. ಸಮಾಜದ ವಿವಿಧ ಹಂತಗಳಲ್ಲಿ ಮಹಿಳೆಯರು ಪ್ರಧಾನವಾಗಿ ಎಲ್ಲಾ ಹಕ್ಕುಗಳನ್ನು ಪಡೆದು ಜೀವಿಸಿದ್ದರೆಂಬುದು ತಿಳಿಯುತ್ತದೆ. ಆದರೆ ಇಂದು ಉದ್ಯೋಗವಕಾಶ, ಆಸ್ತಿಹಕ್ಕಿನಲ್ಲಿ ಪಕ್ಷಪಾತ (ನಮ್ಮಲ್ಲಿ ಅದೆಷ್ಟು ಕುಟುಂಬಗಳಲ್ಲಿ ಹೆಣ್ಣಿಗೆ ಗಂಡಿನಷ್ಟೇ ಆಸ್ತಿಯಲ್ಲಿ ಪಾಲಿದೆ ಹೇಳಿ ?) ಮಹಿಳಾ ನಿರಾಶ್ರಿತರು ಮತ್ತು ಮಹಿಳಾ ಖೈದಿಗಳಿಗೆ ಅನ್ಯಾಯ, ವಿವಾಹಿತ ಮಹಿಳೆಯರಿಗೆ ಉದ್ಯೋಗದ ತಿರಸ್ಕಾರ, ಸ್ತ್ರೀಯರಿಗೆ ಕಡಿಮೆ ವಿಶ್ರಾಂತಿ, ಸಂಘಗಳಲ್ಲಿ ಸೇರಲು ಅನುಮತಿಯ ತಿರಸ್ಕಾರ, ಸಂಘಗಳಲ್ಲಿ ಸೇರಿದ ಮಹಿಳೆಯರಿಗೆ ರಕ್ಷಣೆಯಿಲ್ಲದಿರುವುದು, ಹೆಣ್ಣುಶಿಶು ಹತ್ಯೆ, ವಿವಾಹಕ್ಕೆ ಸಂಬಂಧಪಟ್ಟ ಕಾರ್ಯಗಳಲ್ಲಿ, ಕುಟುಂಬ ಸಂಬಂಧಗಳಲ್ಲಿ ಹಕ್ಕುಬಾಧ್ಯತೆಗಳ ತಿರಸ್ಕಾರ, ಮಹಿಳಾ ಬರೆಹಗಾರರನ್ನು ಲಘುವಾಗಿ ಕಾಣುವುದು, ಹೀಗೆ ಪ್ರಪಂಚದಾದ್ಯಂತ ಅನೇಕ ಬಗೆಗಳಲ್ಲಿ ಮಹಿಳೆಯರಿಗೆ ಅನ್ಯಾಯವಾಗುತ್ತಿದೆ.

> ಮಹಿಳೆಯರ ಸಾಮರ್ಥ್ಯಕ್ಕಾಗಿ ಮತ್ತು ಅವರ ಸಬಲೀಕರಣಕ್ಕಾಗಿ ಬಂಡವಾಳ ಹೂಡುವುದೆಂದರೆ ಆರ್ಥಿಕ ಬೆಳವಣಿಗೆ ಮತ್ತು ಒಟ್ಟಾರೆ ಅಭಿವೃದ್ಧಿಗೆ ನೀಡುವ ಕೊಡುಗೆಯ ನಂಬಲರ್ಹ ಮಾರ್ಗ,
>
> **ಮಾನವ ಅಭಿವೃದ್ಧಿ ವರದಿ 1996**

ಭಾರತಕ್ಕೆ ಸಂಬಂಧಿಸಿದಂತೆ 1933 ನೇ ವರ್ಷದ ಮಾನವೀಯ ಹಕ್ಕುಗಳನ್ನು ರಕ್ಷಿಸುವ ಕಾನೂನಿನ್ವಯ 'ಮಾನವೀಯ ಹಕ್ಕುಗಳು ಎಂಬುದು ಭಾರತದ ಸಂವಿಧಾನಬದ್ಧ ಶಾಸನದಲ್ಲಿರುವ ಪ್ರಕಾರ ಪ್ರತಿಯೊಬ್ಬ ವ್ಯಕ್ತಿಯ ಜೀವನ, ಸ್ವಾತಂತ್ರ್ಯ, ಸಮಾನತೆ ಮತ್ತು ಗೌರವವಗಳಿಗೆ ಸಂಬಂಧಪಟ್ಟ ಹಕ್ಕುಗಳಾಗುವುದು" ಆದರೆ ಮಹಿಳೆಗೆ ಮಾತ್ರ ಸ್ವಾತಂತ್ರ್ಯ, ಸಮಾನತೆ ಎಂಬುದು ಅವರ ಜೀವನದಲ್ಲಿ ಕೈಗೆ ಎಟುಕದ ಫಲಗಳೇ ಆಗಿವೆ. ಸಂವಿಧಾನದಲ್ಲಿ ನಿರೂಪಿಸಿರುವ ಮೂಲಭೂತ ಕರ್ತವ್ಯಳಲ್ಲೊಂದಾದ 'ಸಹೋದರತೆಯನ್ನು ಪ್ರೋತ್ಸಾಹಿಸಬೇಕು ಮತ್ತು ಸ್ತ್ರೀಯರ

ಗೌರವವನ್ನು ರಕ್ಷಿಸಬೇಕು' ಎಂಬುದು ಮುಖ್ಯವಾದದ್ದು. ಆದರೆ ಮಹಿಳೆಯು ಪ್ರತ್ಯೇಕವಾದ ಜೀವನದಲ್ಲೋ, ಕುಟುಂಬ ಜೀವನದಲ್ಲೋ, ಸಾಮಾಜಿಕ ಜೀವನದಲ್ಲೋ, ಕಛೇರಿ ನೌಕರಿ ಜೀವನದಲ್ಲೋ ಗೌರವ ಎಂಬುದು ಅಷ್ಟಾಗಿ ಇಲ್ಲ. ಇದರಿಂದ ಬದುಕುವ ತನ್ನ ಹಕ್ಕಿನಿಂದ ಆಕೆ ವಂಚಿತಳಾಗಿದ್ದಾಳೆ. ಆಕೆಗೆ ತನ್ನ ದೇಹ, ಶ್ರಮ ಹಾಗೂ ನಿರ್ಧಾರಗಳ ಮೇಲೂ ಹಕ್ಕಿಲ್ಲ. ಇಂತಹ ಪರಿಸ್ಥಿತಿ ಸರಿಯಾಗುವವರೆಗೂ ಮಹಿಳಾ ಹಕ್ಕುಗಳನ್ನು ಹಾಗೂ ಮಾನವೀಯ ಹಕ್ಕುಗಳನ್ನು ಪ್ರತ್ಯೇಕವಾಗಿ ವಿಭಜಿಸಬೇಕಾದ ಕಡ್ಡಾಯ ಪರಿಸ್ಥಿತಿಯಲ್ಲೇ ನಾವು ಇದ್ದೇವೆ ಎಂದು ಕಾಣುತ್ತಿದೆ. ಆದ್ದರಿಂದ ಸಮಾಜದಲ್ಲಿ ಮಹಿಳೆಯರ ಬಗ್ಗೆ ಬಲವಾಗಿ ಬೇರೂರಿರುವ ಪೂರ್ವಗ್ರಹಗಳನ್ನು, ಇವುಗಳಿಗೆ ಆಧಾರವಾಗಿರುವ ದೃಷ್ಟಿಕೋನವನ್ನು ಹಾಗೂ ಮಹಿಳೆಯರ ಬಗ್ಗೆ ಸಮಾಜದಲ್ಲಿರುವ ನಿರ್ಲಕ್ಷ್ಯ ಭಾವನೆಯನ್ನು ನಿರ್ಮೂಲನೆ ಮಾಡಬೇಕಾಗಿದೆ. ಮಹಿಳಾ ಹಕ್ಕುಗಳು ಎಲ್ಲಿ ನಿರಾಕರಿಸಲಾಗುತ್ತದೆಯೋ ಅಲ್ಲಿ ನಾವು ದನಿ ಎತ್ತಬೇಕಾಗಿದೆ.

ಮಾನವ ಹಕ್ಕುಗಳು ನೈಸರ್ಗಿಕವಾಗಿ, ಸಹಜವಾಗಿ ಇರಬೇಕಾದ ಅಥವಾ ಸಿಗಬೇಕಾದ ಹಕ್ಕುಗಳು (ಯಾರೂ ಇವುಗಳನ್ನು ಬೇಡುವಂತಾಗಬಾರದು, ಯಾರಿಂದಲೂ ಕಸಿದುಕೊಳ್ಳುವಂತಿರ-ಬಾರದು, ತಾನಾಗಿಯೇ ತೆಗೆದುಕೊಳ್ಳುವಂತಿರಬೇಕು) ಎಂದು ತೀರ್ಮಾನಿಸಲಾಗಿದೆ. ಆದ್ದರಿಂದ ಮಹಿಳೆಯರ ಹಕ್ಕು ಸ್ವಾತಂತ್ರ್ಯ ಎಂಬುದು ಕೇಳಿ ಪಡೆಯಬೇಕಾದ ಭಿಕ್ಷೆಯಲ್ಲ, ಅವುಗಳನ್ನು ತಾವಾಗಿಯೇ ತೆಗೆದುಕೊಳ್ಳುವಂತಹುದು. ಮಹಿಳೆಯರಿಗೆ ಈ ಹಕ್ಕುಗಳು ಸಹಜವಾಗಿ ಸಿಗುವಂತಾದರೆ ಇಂದು ಮಹಿಳೆಯರಿಗೆ ನೌಕರಿ ಮಾಡುತ್ತಿರುವ ಸ್ಥಳಗಳಲ್ಲಿ, ಇನ್ನಿತರ ಸಾರ್ವಜನಿಕ ಸ್ಥಳಗಳಲ್ಲಿ ಅವರ ಮೇಲೆ ನಡೆಯುತ್ತಿರುವ ಲೈಂಗಿಕ ಕಿರುಕುಳ, ದೌರ್ಜನ್ಯ, ದಬ್ಬಾಳಿಕೆ, ತಾರತಮ್ಯಗಳನ್ನು ತಡೆಯಲು ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಆವಶ್ಯಕತೆ ಇರುತ್ತಿರಲಿಲ್ಲ. ನೌಕರಿ ಮಾಡುತ್ತಿರುವ ಮಹಿಳೆಯರಿಗೆ ಉತ್ತಮವಾದ ಮುಕ್ತಜೀವನ ನಡೆಸಲು ಅವಕಾಶ ಕಲ್ಪಿಸಿಕೊಡುವುದೇ ಕಛೇರಿಗಳ ಗುರಿಯಾಗಿರುವುದು. ಈ ಪರಿಸ್ಥಿತಿಯಲ್ಲಿ ಮಾನವ ಹಕ್ಕಿನ ಅಡಿಯಲ್ಲಿ ಮೂಲಭೂತವಾಗಿ ನೌಕರಿ ಮಾಡುವ ಸ್ಥಳಗಳಲ್ಲಿ ಹೆಣ್ಣಿನ ಗೌರವವನ್ನು ಕಾಪಾಡಬೇಕೆಂದು ಭಾವಿಸಿ ನ್ಯಾಯಮೂರ್ತಿ ವರ್ಮಾ ಅವರು ನೀಡಿರುವ ತೀರ್ಪು ಒಂದು ಮುಖ್ಯವಾದ ಬದಲಾವಣೆಯನ್ನು ತಂದಿದೆ. ಮನೆಗೆಲಸ ಮಾಡುತ್ತಿರುವ ಹಾಗೂ ಹಿಂದುಳಿದಿರುವ ಮಹಿಳೆಯರ ಕ್ಷೇಮಾಭಿವೃದ್ಧಿಗಾಗಿ ಅನೇಕ ಮಹಿಳಾ ಸಂಘಟನೆಗಳು ನ್ಯಾಯಕೇಳಿ ಹೋರಾಡುತ್ತಿವೆ. ಸಮಾಜದಲ್ಲಿ ಮಹಿಳೆಯರ ಗೌರವವಲ್ಲದ ಜೀವನವನ್ನು, ಸಹಜವಾಗಿ ಸಿಗಬೇಕಾದ ಮಾನವ ಹಕ್ಕುಗಳು ಇನ್ನೂ ಅವರಿಗೆ ಸಿಗಲಿಲ್ಲ ಎಂಬುದನ್ನೂ ಪ್ರಧಾನವಾಗಿ ಗುರ್ತಿಸಿ ತೋರಿಸುತ್ತಿವೆ. ಆದ್ದರಿಂದ ಮಾನವ ಹಕ್ಕುಗಳು ಎಂದು ಸಾಮಾನ್ಯವಾಗಿ ಹೇಳುತ್ತಿರುವುದರಲ್ಲಿ ಗಂಡಿಗೆ ಸಿಗುತ್ತಿರುವ ಎಲ್ಲಾ ಹಕ್ಕುಗಳು ಹೆಣ್ಣಿಗೆ ಸಿಗುತ್ತಿಲ್ಲ ಎಂಬುದು ಸ್ಪಷ್ಟ.

ಮಾನವ ಹಕ್ಕುಗಳನ್ನು ಪಡೆಯುವ ಸಲುವಾಗಿ ಇಂದು ಮಹಿಳೆಯರು ಕ್ರಿಯಾಶೀಲರಾಗಿ ಚಳವಳಿಯಲ್ಲಿ ತೊಡಗಿರುವುದು ಪ್ರಪಂಚದಾದ್ಯಂತ ಕಂಡುಬರುತ್ತಿದೆ. ಇದೇ ರೀತಿ ತನ್ನನ್ನು ಸಕ್ರಿಯವಾಗಿ ಚಳವಳಿಯಲ್ಲಿ ತೊಡಗಿಸಿಕೊಂಡಿದ್ದ ಈಲಿನಾರ್ ರೂಸ್‌ವೆಲ್ಟ್ ಎಂಬುವರ ಪಾತ್ರ ಇಲ್ಲದಿದ್ದಿದ್ದರೆ 'ಸಾರ್ವತ್ರಿಕ ಮಾನವೀಯ ಹಕ್ಕುಗಳ ಪ್ರಕಟನೆ' (universal declaration human rights 1948) ಪೂರ್ಣವಾಗುತ್ತಿರಲಿಲ್ಲ ಎಂದು ರಾಜಕೀಯ ವಿಶ್ಲೇಷಕರು ಹೇಳುತ್ತಿದ್ದಾರೆ. ಇದನ್ನು ನೋಡಿದಾಗ ಮಹಿಳೆಯರು ತಮ್ಮ ಹಕ್ಕುಗಳ ಬಗ್ಗೆ ಜಾಗೃತರಾಗುತ್ತಿದ್ದಾರೆ ಎನ್ನಬಹುದು. 1979 ರಲ್ಲಿ ಏರ್ಪಟ್ಟ ' ಮಹಿಳೆಯರ ಸಮಾವೇಶ'ವು ಹೆಣ್ಣಿನ ಬಗ್ಗೆ ಲಿಂಗ ಸಂಬಂಧವಾಗಿ ಹಾಗೂ ಮೂಲಭೂತವಾಗಿ ಏರ್ಪಡುವ 'ಪಕ್ಷಪಾತ' (Discrimination) ಎಂದರೇನು ಎಂಬುದಕ್ಕೆ ಸ್ಪಷ್ಟತೆಯನ್ನು ನೀಡಿತು. ಮಹಿಳೆಯರಿಗೆ ವಿರೋಧವಾದ ಎಲ್ಲ ಬಗೆಯ ಪಕ್ಷಪಾತೀಯ ಚಟುವಟಿಕೆಗಳನ್ನು ಹೋಗಲಾಡಿಸುವ 'ಸೀಡಾ ಎಂಬ ಸಂಘಟನೆ [CEDAW - Convention on the Elimination of all forms of Discrimination against woman] 1982ರಲ್ಲಿ ಸ್ಥಾಪನೆಯಾಯಿತು. ಬರ್ಮಾದೇಶದ (ಈಗಿನ ಹೆಸರು ಮಯನ್ಮಾರ್) ಜನಪ್ರಿಯ ಚಳವಳಿಯ ನಾಯಕಿಯೂ, ಮಾನವಹಕ್ಕುಗಳ ಹೋರಾಟಗಾರ್ತಿಯೂ ಆದ ಆ್ಯಂಗ್ ಸ್ಯಾನ್‌ಸೂಕಿಗೆ ಮಾನವೀಯ ಹಕ್ಕುಗಳ ಹೋರಾಟದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದಕ್ಕೆ ನೊಬೆಲ್ ಬಹುಮಾನ ಕೊಟ್ಟಿರುವುದು ಗಮನಾರ್ಹವಾದ ಸಂಗತಿ. 1992 ರಲ್ಲಿ ರಚಿಸಲಾಗಿದ್ದ ಮಹಿಳೆಯರ ರಾಷ್ಟ್ರೀಯ ಸಂಘಟನೆಗಳ ರಚನೆಯು, ವಿಯೆನ್ನಾ ಮಾನವ ಹಕ್ಕುಗಳ ಸಮಾವೇಶದ ಮುಖ್ಯ ಅಂಶವಾಗಿ ಕಂಡು ಬಂದಿತು. ಇದು ' ಮಹಿಳೆಯರ ಮಾನವ ಹಕ್ಕುಗಳಿಗೆ' ಆದ್ಯತೆ ಕೊಡಬೇಕು ಎಂದು ಬಿನ್ನವಿಸಿತು. ಇದರ ಪರಿಣಾಮವಾಗಿ 1993 ರಲ್ಲಿ ವಿಯೆನ್ನಾ ಮಾನವ ಹಕ್ಕುಗಳ ಸಮಾವೇಶದಲ್ಲಿ 'ಮಹಿಳೆಯರ ಹಕ್ಕುಗಳೂ ಮಾನವ ಹಕ್ಕುಗಳೇ' ಎಂದು ಒತ್ತಾಯಿಸಲಾಯಿತು. 'ಸೀಡಾ' ಸಹ ಇದನ್ನೇ ಆಧರಿಸುವ ಹಲವು ಸೂಕ್ತಕ್ರಮಗಳನ್ನು ತೆಗೆದುಕೊಂಡಿತು. 1995 ರಲ್ಲಿ ಬೀಜಿಂಗ್‌ನಲ್ಲಿ ನಡೆದ ಮಹಿಳೆಯರ ನಾಲ್ಕನೆಯ ಅಂತಾರಾಷ್ಟ್ರೀಯ ಸಮಾವೇಶದಲ್ಲಿ ಇದನ್ನೇ ಒತ್ತಾಯಿಸಲಾಯಿತು. ಹೀಗೆ ಹಲವಾರು ಕೋನಗಳಲ್ಲಿ

> ಮಹಿಳೆಯರ ಸಬಲೀಕರಣ ಮತ್ತು ನಿರ್ಧಾರ ತೆಗೆದುಕೊಳ್ಳುವ ಪ್ರಕ್ರಿಯೆ ಮತ್ತು ಅಧಿಕಾರ ಪಡೆದುಕೊಳ್ಳುವುದೂ ಸೇರಿದಂತೆ ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿ ಸಮಾನತೆಯ ಆಧಾರದ ಮೇಲೆ ಅವರು ಸಂಪೂರ್ಣವಾಗಿ ಭಾಗವಹಿಸುವುದು ಸಮಾನತೆ, ಅಭಿವೃದ್ಧಿ ಮತ್ತು ಶಾಂತಿಯ ಮುನ್ನಡೆಗೆ ಮೂಲಭೂತವಾದವುಗಳು.
>
> **- ದಿ ಬೀಜಿಂಗ್ ಡಿಕ್ಲರೇಷನ್, 1995**

ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ವಿಶೇಷವಾದ ಕ್ರಮ ತೆಗೆದುಕೊಂಡಿದ್ದರೂ ಮಹಿಳೆಯರಿಗೆ ಇನ್ನೂ ಮಾನವ ಹಕ್ಕುಗಳು ಸಂಪೂರ್ಣವಾಗಿ ಸಿಕ್ಕಿಲ್ಲ.

ಮಾನವ ಹಕ್ಕುಗಳ ಶಾಸನದ ಪ್ರಕಾರ ' ಪಕ್ಷಪಾತವಲ್ಲದ, ಭೇದವಲ್ಲದ ಸಮಾನತೆಯನ್ನು ರೂಪಿಸುವುದು' ಆದರೆ ಹೆಣ್ಣು ಎಂಬ ಕಾರಣದಿಂದಲೇ 'ಮಾನವ ಹಕ್ಕುಗಳಲ್ಲಿ ಸಮಾನತೆ ಸಿಗಲಿಲ್ಲ' ಎಂಬುದೇ ಮಹಿಳೆಯರ ಘೋಷಣೆ. ಮಹಿಳೆಯರಿಗಾಗಿ ಇರುವ ಮಾನವ ಹಕ್ಕು ಗಳ ಹೋರಾಟದ ಸಂಘಟನೆಗಳು ಇದನ್ನೇ ಒತ್ತಾಯಿಸುತ್ತಿವೆ. ಮಾನವನ ಮೂಲಭೂತ ಹಕ್ಕುಗಳು, ಸ್ವಾತಂತ್ರ್ಯಗಳು ಎಲ್ಲವು ಜನರ ಜನ್ಮಸಿದ್ಧಹಕ್ಕು ಎಂದು ವಿಶ್ವಸಂಸ್ಥೆ. ಘೋಷಿಸಿದರೂ ಅವುಗಳನ್ನು ಮಹಿಳೆಯರ ವಿಷಯದಲ್ಲಿ ಕಾರ್ಯರೂಪಕ್ಕೆ ತರುವುದು ಅಷ್ಟೊಂದು ಸುಲಭ ಸಾಧ್ಯವಾದುದಲ್ಲ ಮಾನವ ಹಕ್ಕುಗಳ ಶಾಸನದ ಪ್ರಕಾರ ಮಾನವ ಹಕ್ಕುಗಳನ್ನೂ, ಮೂಲಭೂತವಾದ ಸ್ವಾತಂತ್ರ್ಯಗಳನ್ನೂ ಅಂಗೀಕರಿಸಿದ ದೇಶಗಳಲ್ಲಿ ಯಾವ ರೀತಿ ಇದನ್ನು ಕಾಪಾಡಿಕೊಂಡು ಬರಲಾಗುತ್ತಿದೆಯೋ ಹಾಗೆ ಉಳಿದೆಲ್ಲಾ ದೇಶಗಳಲ್ಲಿಯೂ ಕಾಪಾಡಿಕೊಂಡು ಬರುವುದು ಕಾನೂನಿನ ಕರ್ತವ್ಯವಾಗಿದೆ. ಹಾಗಾಗಿ ಈ ಹಕ್ಕುಗಳು ಯಾವ ದೇಶದಲ್ಲಿ ನಿರಾಕರಿಸಲ್ಪಡುತ್ತಿವೆಯೋ ಆ ದೇಶ ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಉದ್ಭವವಾಗುವ ಪ್ರಶ್ನೆಗೆ ಉತ್ತರ ಕೊಡ ಬೇಕಾಗುತ್ತದೆ. ಅದು ಮಾತ್ರವಲ್ಲದೆ ಇಂಥ ದೇಶಗಳ ಬಗ್ಗೆ ಸೂಕ್ತವಾದ ಕ್ರಮ ತೆಗೆದುಕೊಳ್ಳಲು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಕೆಲವು ಸಂಘಟನೆಗಳಿವೆ.

ಸಾಮಾನ್ಯವಾಗಿ, ಮಾನವೀಯ ಹಕ್ಕುಗಳು ಅಧಿಕಾರದ ದುರುಪಯೋಗವನ್ನು ತಡೆಯುವುದಕ್ಕಾಗಿಯೇ ಇವೆ ಎನ್ನಬಹುದು. ಅಧಿಕಾರವನ್ನು ಹೊಂದಿರುವ ಪುರುಷ ಪ್ರಧಾನ ವ್ಯವಸ್ಥೆಯು ಅಧಿಕಾರವಿಲ್ಲದ ಮಹಿಳೆಯರ ಮೇಲೆ ತಮ್ಮ ಅಧಿಕಾರವನ್ನು ಪ್ರಯೋಗಿಸಿ ಅವರನ್ನು ನಾಲ್ಕು ಗೋಡೆಯ ಮಧ್ಯೆ ಇರುವಂತೆ ಮಾಡಿದೆ. ಈ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಗಂಡು ಎಂಬುವವನು, ಮನೆಯಲ್ಲಿ ಒಬ್ಬ ಗಂಡನಾಗಿಯೋ ಅಥವಾ ಕಛೇರಿಗಳಲ್ಲಿ ಒಬ್ಬ ಮೇಲಾಧಿಕಾರಿಯಾಗಿಯೋ ಅಥವಾ ಕಟ್ಟಡ ನಿರ್ಮಾಣ ಕೆಲಸದ ಸ್ಥಳಗಳಲ್ಲಿ ಒಬ್ಬ ಮೇಸ್ತ್ರಿಯಾಗಿಯೋ ಇದ್ದು ಮಹಿಳೆಯರಿಗಿರುವ ಮಾನವೀಯ ಹಕ್ಕುಗಳನ್ನು ಉಲ್ಲಂಘಿಸುತ್ತಾನೆ. ಒಂದು ಬಗೆಯಲ್ಲಿ ನೋಡಿದರೆ ಮಾನವ ಹಕ್ಕುಗಳು ಎಂಬುದು "ಅಧಿಕಾರದಲ್ಲಿರುವವರಿಂದ ಅಧಿಕಾರವಿಲ್ಲದವರ ಹಕ್ಕುಗಳನ್ನು ರಕ್ಷಿಸುವುದು" ಈ ಕಾರಣದಿಂದಲೇ ಇಂದಿನ ಕಾಲಘಟ್ಟದಲ್ಲಿ ಮಹಿಳೆಯರಿಗೆ ಅಧಿಕಾರ ನೀಡುವುದರ ಮೂಲಕ ಅವರ (ಮಾನವೀಯ) ಹಕ್ಕುಗಳನ್ನು ರಕ್ಷಿಸಬಹುದೆಂಬ ಧೋರಣೆಯು ರೂಪಿತವಾಗುತ್ತದೆ. ಮಾನವೀಯ ಹಕ್ಕು ಶಾಸನದ ಪ್ರಕಾರ ಅಧಿಕಾರದ ದುರುಪಯೋಗವನ್ನು ತಡೆಯುವುದೂ, ಮಾನವೀಯ ಹಕ್ಕುಗಳನ್ನು ಮತ್ತು ಮೂಲಭೂತ ಸ್ವಾತಂತ್ರ್ಯಗಳನ್ನು ಪ್ರಜೆಗಳು ಸುಗಮವಾಗಿ ಅನುಭವಿಸುವ ನೆಲೆಯನ್ನುಂಟು ಮಾಡುವುದು ಪ್ರತಿಯೊಂದು ದೇಶದ ಸರ್ಕಾರದ ಕರ್ತವ್ಯ. ಕೆಲವು ಸಂದರ್ಭಗಳಲ್ಲಿ ಪುರುಷಪ್ರಧಾನ ಸಮಾಜದಲ್ಲಿ ಅಧಿಕಾರವಿಲ್ಲದವರೂ ಮಹಿಳೆಯರ ಮಾನವ ಹಕ್ಕುಗಳನ್ನು ಉಲ್ಲಂಘಿಸುವುದುಂಟು.

ಅನೇಕ ಸಂದರ್ಭಗಳಲ್ಲಿ ಮಹಿಳೆಯರ ಮಾನವ ಹಕ್ಕುಗಳಿಗೆ ಸಂಬಂಧಿಸಿದಂತಹ ಕಾರ್ಯಚಟುವಟಿಕೆಗಳು ಮಹಿಳೆಯರ

> ರಾಜಕೀಯ ಅವಕಾಶವೆನ್ನುವುದು ಎಲ್ಲರಿಗೂ ಸೇರಿದ್ದು. ರಾಜಕೀಯ ಎಲ್ಲರ ಕೆಲಸವಾಗಿದೆ. ಅದು ನಮ್ಮಲ್ಲಿ ಪ್ರತಿಯೊಬ್ಬರಿಗೂ ಸಂಬಂಧಿಸಿರುತ್ತದೆ.... ಮಹಿಳೆಯರು ತಮ್ಮ ಜನಸಂಖ್ಯೆ ಪ್ರಮಾಣಕ್ಕನುಗುಣವಾಗಿ ಹೆಚ್ಚು ಸಂಖ್ಯೆಯಲ್ಲಿ ತೊಡಗಿಕೊಂಡಷ್ಟೂ ಪಕ್ಷಗಳಲ್ಲಿ, ಚುನಾಯಿತ ಸಂಸ್ಥೆಗಳಲ್ಲಿ, ಸರ್ಕಾರಗಳಲ್ಲಿ ಮತ್ತು ಅಂತರ್‌ರಾಷ್ಟ್ರೀಯ ಸಂಸ್ಥೆಗಳಲ್ಲಿ ರಾಜಕೀಯದ ವಿಧಿವಿಧಾನಗಳನ್ನು ಮತ್ತು ಅವುಗಳ ಫಲಿತಾಂಶಗಳನ್ನು ಹೆಚ್ಚು ಬದಲಿಸಬಲ್ಲರು. ಆಗ ಮಾತ್ರ, ಪ್ರಜಾಪ್ರಭುತ್ವದ ಪರಿಕಲ್ಪನೆ ಒಂದು ಮೂರ್ತರೂಪ () ಮತ್ತು ಸ್ಪಷ್ಟ ಅಭಿವ್ಯಕ್ತಿಯನ್ನು ಪಡೆಯಬಲ್ಲದು. ಪ್ರಜಾಪ್ರಭುತ್ವ ಮತ್ತು ಮಹಿಳೆಯರ ಸಹಭಾಗಿತ್ವ ಜೊತೆಜೊತೆಯಾಗಿರುತ್ತವೆ ಮತ್ತು ಪರಸ್ಪರ ಮುಂದುವರಿಕೆಗೆ ಸಹಕರಿಸುತ್ತವೆ.
>
> - ಇಂಟರ್‌ಪಾರ್ಲಿಮೆಂಟರಿ ಯೂನಿಯನ್
> ಡಾಕ್ಯುಮೆಂಟ್ 19, 1997

ಸಮಸ್ಯೆಗಳಾಗಿಯೂ, ಸ್ತ್ರೀವಾದಕ್ಕೆ ಸಂಬಂಧಿಸಿದ್ದಾಗಿಯೂ ಚಿತ್ರಿಸಲಾಗಿದ್ದು ನಿಸ್ಸತ್ವವಾಗಿ ಹೋಗುತ್ತಿವೆ. ಮಹಿಳೆಯರ ಮಾನವ ಹಕ್ಕುಗಳು ಎಂಬವು ಎಲ್ಲಿಯೋ ವಿಶ್ವಸಂಸ್ಥೆಯ ಸಭೆಗೆ ಸೇರಿದ ಹಾಗೂ ನಮಗೆ ಸಿಗದ ದೂರದಲ್ಲಿ ಇರುವುದಲ್ಲ. ದಿನನಿತ್ಯ ಮನೆಗಳಲ್ಲಿ, ಬೀದಿಗಳಲ್ಲಿ, ದುಡಿಯುವ ಸ್ಥಳಗಳಲ್ಲಿ, ಕಛೇರಿಗಳಲ್ಲಿ ಮಹಿಳೆಯರ ಸಮಸ್ಯೆಗಳನ್ನು ಮಾನವ ಹಕ್ಕುಗಳ ಉಲ್ಲಂಘನೆ ಅಲ್ಲ ಎನ್ನುವಂತೆ ನಿರಾಕರಿಸಲಾಗುತ್ತಿವೆ ಎಂಬುದನ್ನು ತಿಳಿಯಬೇಕು. ತಿಳಿಸಬೇಕು.

ಮಹಿಳೆಯರಿಗೆ ಸಿಗಬೇಕಾದ ಮಾನವೀಯ ಹಕ್ಕುಗಳಿಗೆ ಬಾಧಕವಾಗಿರುವುದು, ಮುಖ್ಯವಾಗಿ ಮತ, ಕಾನೂನು, ಸಮಾಜದ ರಚನೆಗಳೇ, ಕಾನೂನುಗಳನ್ನು ತಿದ್ದಿ ಮಹಿಳೆಯರಿಗೆ ಸಮಾನವಾದ ಹಕ್ಕು ನೀಡಲು ಸಜ್ಜಾದಾಗಲೂ ಕೂಡ ಮತವೂ, ಸಮಾಜವೂ, ಅಡ್ಡ ನಿಲ್ಲುತ್ತವೆ. ಮಾನವೀಯ ಹಕ್ಕುಗಳನ್ನು ಒತ್ತಾಯದಿಂದ ಜಾರಿಗೊಳಿಸಿದಾಗ ಮಾತ್ರ ಮಹಿಳೆಯರ ಹಕ್ಕನ್ನು ರಕ್ಷಿಸಬಹುದು. ಇದಕ್ಕಾಗಿ ಜಾಗೃತಿಯನ್ನು ಉಂಟುಮಾಡುವುದು ಮಾತ್ರವಲ್ಲದೆ ಇದರ ರಕ್ಷಣೆಗಾಗಿ ಪ್ರತಿಯೊಬ್ಬರೂ ಸ್ತ್ರೀವಾದಿ ಚಿಂತಕರು, ಬರಹಗಾರರು, ಮಾಧ್ಯಮಗಳು ಕ್ರಿಯಾಶೀಲವಾಗಬೇಕಾಗಿದೆ.

"ಹೊಡೆಯುವುದು ಗಂಡನ ಹಕ್ಕು" ಎಂದು ಚಿಂತಿಸುವ ಈ ಪುರುಷಪ್ರಧಾನ ಸಮಾಜದಲ್ಲಿ ಮಹಿಳೆಯರಿಗೆ ಅವರ ಹಕ್ಕುಗಳು ಮೊದಲು ಸಿಗಬೇಕು. ಯಾವುದೇ ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷ ಮತ್ತು ಮಹಿಳೆ ಇಬ್ಬರೂ ಸಮಭಾಗಿಗಳು. ಒಂದು ಸಮಾಜದ ಒಟ್ಟು ಸ್ವರೂಪದಲ್ಲಿ ಪುರುಷನಿಗೆ ಇರುವ ಸ್ಥಾನಮಾನಗಳು ಸಹಜವಾಗಿಯೇ ಮಹಿಳೆಗೂ ದೊರಕಬೇಕು.

ಭ್ರಷ್ಟಾಚಾರ ಮತ್ತು ಸರಕಾರದಲ್ಲಿ ಮಹಿಳೆಯರು ಎಂಬ ವಿಷಯ ಕುರಿತ ವಿಶ್ವಬ್ಯಾಂಕಿನ ಅಧ್ಯಯನವೊಂದು ಸರಕಾರದಲ್ಲಿ ಹೆಚ್ಚು ಸಂಖ್ಯೆಯ ಮಹಿಳೆಯರು ಭಾಗವಹಿಸುವಿಕೆಗೂ ಕಡಿಮೆ ಭ್ರಷ್ಟಾಚಾರದ ಮಟ್ಟಕ್ಕೂ ಸಂಬಂಧವಿದೆಯೆಂದು ಹೇಳುತ್ತದೆ. ಮಹಿಳೆಯರು ಜನಸಾಮಾನ್ಯರ ಏಳಿಗೆಯ ಬಗ್ಗೆ ಹೆಚ್ಚಿನಕಾಳಜಿಯನ್ನು ಹೊಂದಿರುತ್ತಾರೆಂದು ಸೂಚಿಸುತ್ತದೆ.

- ಡಾಲರ್ ಎಟ್ ಆಲ್ (1999)

ಪ್ರೊಗ್ರೆಸ್ ಆಫ್ ದಿ ವರ್ಲ್ಡ್ಸ್ ವಿಮೆನ್ 2000

ಯುನಿಫೆಮ್ ದ್ವೈವಾರ್ಷಿಕ ವರದಿ

ವರದಕ್ಷಿಣೆ ಹಿಂಸೆ, ಮನೆಗಳಲ್ಲಿ ಮಹಿಳೆಯರನ್ನು ಹಿಂಸಿಸುವುದು, ಹೆಣ್ಣು ಶಿಶುಗಳನ್ನು ಕೊಲ್ಲುವುದು, ಹೆಣ್ಣಿನ ಅತ್ಯಾಚಾರ ಇವುಗಳನ್ನೆಲ್ಲಾ ಮಾನವ ಹಕ್ಕುಗಳ ಉಲ್ಲಂಘನೆ ಎಂದು ಪರಿಗಣಿಸುವುದೇ ಇಲ್ಲ. ಅತ್ಯಾಚಾರಕ್ಕೂ ಸಾಕ್ಷಿ ಬೇಕೆಂದು ಕೇಳುತ್ತಿರುವವರು ಇದನ್ನು ಹೇಗೆ ಪರಿಗಣಿಸುತ್ತಾರೆ ? ಸಂವಿಧಾನದ ತಿದ್ದುಪಡಿ ಮಾಡಿಯಾದರೂ ಮಹಿಳೆಯರ ಹಕ್ಕುಗಳನ್ನು ರಕ್ಷಿಸಬೇಕು. ಮಹಿಳೆಯರಲ್ಲಿ ಸಾಕಷ್ಟು ಸಾಮರ್ಥ್ಯವೂ, ಅನನ್ಯತೆಯೂ ಇವೆ. ಪುರುಷರಿಗಿಂತ ಮಿಗಿಲಾಗಿ ಇಲ್ಲವಾದರೂ ಪುರುಷರಿಗೆ ಸಮನಾದ ನೆಲೆಗಾದರೂ ಮುಂದುವರೆಯಬೇಕು. ಇದಕ್ಕಾಗಿ ಮಹಿಳೆಯರು ಹೋರಾಡಲು ಮುಂದೆ ಬರಬೇಕು.

ಮಹಿಳೆಯರಿಗಾಗಿ ಇರುವ ಮಾನವ ಹಕ್ಕುಗಳನ್ನು ಉಲ್ಲಂಘಿಸುವುದು ತುಂಬಾ ಅಪಾಯ. ಬಡತನ, ಅಜ್ಞಾನ ಮಹಿಳೆಯರನ್ನು ದುಡಿಮೆಯ ಯಂತ್ರಗಳನ್ನಾಗಿ ಮಾಡುತ್ತಾ ಬಂದಿವೆ. ಮಹಿಳೆಯರು ಚಿತ್ರ ಹಿಂಸೆ, ಲೈಂಗಿಕ ಬಲಾತ್ಕಾರಗಳಿಗೆ ಒಳಗಾಗುತ್ತಿದ್ದಾರೆ. ಇದರಿಂದ ಮಹಿಳೆಯರು ದೈಹಿಕವಾಗಿ ಮತ್ತು ಮಾನಸಿಕವಾಗಿ ಪುರುಷರ ಆಕ್ರಮಣಕ್ಕೆ ಬಲಿಯಾಗುತ್ತಿದ್ದಾರೆ. ಕಾನೂನು ಎಲ್ಲರಿಗೂ ಸಾಮಾನ್ಯವಾಗಿದ್ದರೂ ಅದರಲ್ಲಿ ಕೆಲವು ರಂಧ್ರಗಳು ಇರುವುದರಿಂದ ಮಹಿಳೆಯರಿಗೆ ನ್ಯಾಯ ಸಿಗುತ್ತಿಲ್ಲ. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಎಷ್ಟೋ ಮಹಿಳೆಯರು ನಾಯಕತ್ವದ ಜವಾಬ್ದಾರಿಯಲ್ಲಿ ಸಮರ್ಥವಾಗಿ ಕಾರ್ಯನಿರ್ವಹಿಸಿದ್ದಾರೆ. ಹಾಗಾಗಿ ಮಹಿಳಾ ಹಕ್ಕುಗಳನ್ನು ನಿರಾಕರಿಸಿದಾಗ ಮಹಿಳೆಯರು ಹೋರಾಡಿಯಾದರೂ ನ್ಯಾಯ ಪಡೆಯಲೇ ಬೇಕಾಗಿದೆ. ತಮ್ಮ ಹಕ್ಕುಗಳನ್ನು ಪಡೆಯಲು ಮಹಿಳೆಯರಿಗೆ ಹೋರಾಡುವ ನೈತಿಕ ಧೈರ್ಯದ ಕೊರತೆಯಿದೆ. ಆದ್ದರಿಂದ ಅವರು ಎದೆಗುಂದದೆ ಮುನ್ನಡೆಯ ಬೇಕಾದರೆ ಖಾಸಗಿ ಸಂಘ ಸಂಸ್ಥೆಗಳು ಸಹಾಯ ಮಾಡಬೇಕಾಗಿದೆ. ದೇಶದ ಅಭಿವೃದ್ಧಿಗಾಗಿ ಕೆಲವು ಯೋಜನೆಗಳನ್ನು ಕಾರ್ಯ ರೂಪಕ್ಕೆ ತರುವ ಜವಾಬ್ದಾರಿಯಲ್ಲಿ ಮಹಿಳೆಯರು ಪಾಲ್ಗೊಳ್ಳುವಂತಾಗಬೇಕು. ಮಹಿಳೆಯರ ಪ್ರಾತಿನಿಧ್ಯ ಎಲ್ಲಾ ಹಂತಗಳಲ್ಲೂ ಇರಬೇಕು. ಮಹಿಳೆಯರನ್ನು ಸರಿಸಮನಾಗಿ ಭಾವಿಸುವ ದೃಷ್ಟಿ ಪುರುಷರಲ್ಲಿ ಮೂಡುವುದು ಇಂದಿನ ಅಗತ್ಯವಾಗಿದೆ. ಇದರ ಜೊತೆಗೆ ಸರ್ಕಾರವು ಈ ದಿಶೇಯಲ್ಲಿ ಅತಿಪ್ರಮುಖವಾದ ಪಾತ್ರವನ್ನು ವಹಿಸಬೇಕು.

ಎಲ್ಲ ಸ್ಥಳಗಳಲ್ಲೂ, ಎಲ್ಲ ವಿಧದಲ್ಲೂ ಲಿಂಗತಾರತಮ್ಯವನ್ನು ಹೋಗಲಾಡಿಸುವುದಕ್ಕಾಗಿ ಅನೇಕ ಮಾರ್ಗೋಪಾಯಗಳನ್ನು

ಸೂಚಿಸುವುದು ಸರ್ಕಾರದ ಅತಿಮುಖ್ಯಕರ್ತವ್ಯವೂ ಹೌದು. ಅದೇ ರೀತಿ ಅನಿವಾರ್ಯವೂ ಆಗಬೇಕಾಗಿದೆ. ಮಹಿಳೆಯರ ಮಾನವೀಯ ಹಕ್ಕುಗಳನ್ನು ಉಲ್ಲಂಘಿಸಿದವರ ಮೇಲೆ ತುರ್ತಾಗಿ, ಕಾನೂನಿನ ರೀತ್ಯ ಶಿಕ್ಷೆಯನ್ನು ವಿಧಿಸುವುದರ ಮೂಲಕ ಮಹಿಳೆಯ ಮಾನವ ಹಕ್ಕುಗಳ ರಕ್ಷಣೆಯ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ.

ಮಹಿಳೆಯರು ಒಂದು ವರ್ಗವಾಗಿ ಇನ್ನೊಂದು ಗುಂಪನ್ನು ಅಧೀನಕ್ಕೊಳಪಡಿಸಿಲ್ಲ - ನಾವು ದಮನಕಾರರಾಗಲು ಅಥವಾ ದಮನಿತರಾಗಲು ಬಯಸುವುದಿಲ್ಲ.

-ಸೂಸನ್ ಬ್ರೌನ್‌ಮಿಲ್ಲರ್

# ಲಿಂಗ ಅಸಮಾನತೆಯ ವಿಭಿನ್ನ ಮುಖಗಳು

-ಡಾ.ದಯಾನಂದ, ಮೈಸೂರು

ಶತ ಶತಮಾನಗಳಿಂದ ಲಿಂಗ ಅಸಮಾನತೆ ಮಾನವ ಸಮಾಜವನ್ನು ಕಾಡುತ್ತಿದೆ. ಇಂದಿನ ಆಧುನಿಕ ಕಂಪ್ಯೂಟರ್ ಯುಗವೂ ಇದರಿಂದ ಹೊರತಾಗಿಲ್ಲ. ಪ್ರಪಂಚದ ಅರ್ಧದಷ್ಟು ಜನರು ಮಹಿಳೆಯರೇ ಆದರೂ ಅವರು ಪುರುಷರಿಗೆ ಸಮಾನರಾಗಿಲ್ಲದಿರುವುದು ಸಾಮಾಜಿಕ ದುರಂತವೇ ಸರಿ. ಕುಟುಂಬ ಮತ್ತು ಸಮಾಜದ ಪ್ರತಿಯೊಂದು ಚಟುವಟಿಕೆಗಳಲ್ಲಿ ಮಹಿಳೆಯರ ಸಹಕಾರ, ಪ್ರೋತ್ಸಾಹ ಮತ್ತು ಸಹಭಾಗಿತ್ವ ಅನಿವಾರ್ಯ ವಾಸ್ತವ. ಸಾಮಾಜಿಕ ಅಭಿವೃದ್ಧಿಯಲ್ಲಿ ಮಹಿಳಾ ಜವಾಬ್ದಾರಿ ಪ್ರಧಾನವಾದುದು.

ಆಧುನಿಕ ಮಹಿಳೆ ನೆಚ್ಚಿನ ಮಡದಿಯಾಗಿ, ಸೊಸೆಯಾಗಿ, ತಾಯಿಯಾಗಿ, ಮನೆಯ ಮೊದಲ ಗುರುವಾಗಿ, ಕಛೇರಿಯಲ್ಲಿ ಯಶಸ್ವಿ ನೌಕರಳಾಗಿ ತನ್ನ ಬಹುಮುಖ ಪ್ರತಿಭೆಯನ್ನು ಮೆರೆದಿದ್ದಾಳೆ. ಕುಟುಂಬದ ನೆಮ್ಮದಿಗೆ ಕಾರಣಕರ್ತಳಾಗಿ ಆರ್ಥಿಕತೆಯ ಆಧಾರ ಸ್ತಂಭವೂ ಆಗಿದ್ದಾಳೆ. ಗ್ರಾಮೀಣ ಮಹಿಳೆ ಮನೆಯೊಳಗೆ ಮತ್ತು ಹೊರಗೆ ದುಡಿದು ಸಂಸಾರ ನೌಕೆಯನ್ನು ಸಾಗಿಸುವಲ್ಲಿ ಮಹತ್ತರ ಪಾತ್ರ ವಹಿಸಿದ್ದಾಳೆ.

ಯಾವುದೇ ಸಮಾಜದ ಸಾಂಸ್ಕೃತಿಕ ಶ್ರೀಮಂತಿಕೆ ಮತ್ತು ನಾಗರೀಕತೆಯ ಮಟ್ಟವನ್ನು ಅಳೆಯುವುದು ಆ ಸಮಾಜದಲ್ಲಿನ ಮಹಿಳೆಗಿರುವ ಸ್ಥಾನಮಾನಗಳಿಂದ. ಭಾರತೀಯ ಸಂಸ್ಕೃತಿಯಲ್ಲಿ ಮಹಿಳೆಯರಿಗೆ ಉತ್ತಮ ಸ್ಥಾನ ಕೊಟ್ಟು, ಗೌರವಿಸಿದರೂ ಅವರನ್ನು ಪುರುಷರಿಗಿಂತ ಕೀಳಾಗಿ ಕಂಡಿರುವುದು ನಮ್ಮ ಗ್ರಂಥಗಳಿಂದ ತಿಳಿದು ಬರುತ್ತದೆ. "ಆಧುನಿಕ ಯುಗದಲ್ಲೂ ಮಹಿಳೆ ಶೋಷಣೆಯಿಂದ ಬಿಡುಗಡೆಗೊಂಡಿಲ್ಲ. ಆಧುನಿಕ ವಿದ್ಯಾಮಾನಗಳು ಹೆಣ್ಣಿಗೆ ಅತ್ಯಾಧುನಿಕ ಸಮಸ್ಯೆಗಳನ್ನು ತಂದೊಡ್ಡಿವೆ. ಅನಾದಿಕಾಲದಿಂದ ಗೃಹ ಬಂಧನದಲ್ಲಿಟ್ಟಿದ್ದ ಮಹಿಳೆಯನ್ನು ಇದೀಗ ಹಲವು ಸಾಮಾಜಿಕ ಹೊಣೆಗಾರಿಕೆಗೂ ತರಲಾಗಿದೆ. ಆಕೆಗೆ ವಿದ್ಯೆ ನೀಡಲಾಗುತ್ತಿದೆ. ವಿದ್ಯೆ ಕಲಿತಿದ್ದರ ಪರಿಣಾಮ ಮತ್ತು ಗೃಹ ಕೈಗಾರಿಕೆಗಳ ಅವನತಿಯಿಂದಾಗ ಇಂದು ಮಹಿಳೆ ಮನೆಯಲ್ಲಿ ಮತ್ತು ಹೊರಗೆ ದುಡಿಯುವಂತಾಗಿದೆ. ಮೊದಲು ಮನೆಯ ನಿರ್ವಹಣೆ ಜವಾಬ್ದಾರಿ ಮಾತ್ರ ಇದ್ದು, ಇಂದು ದುಡಿದು ಸಂಸಾರ ಸಾಕುವ ಎರಡೂ ಜವಾಬ್ದಾರಿಗಳಿಂದ ಕಂಗೆಟ್ಟಿದ್ದಾಳೆ. ಆಕೆಗೆ ಬದುಕು ಇನ್ನೂ ಭಾರವಾದಂತಾಗಿದೆ".

ಹೆಣ್ಣು ಮಕ್ಕಳು ನಿಷ್ಪ್ರಯೋಜಕರೆಂದು ನಮ್ಮ ಸಮಾಜ ಭ್ರಮಿಸಿದೆ. ಹೆಣ್ಣು ಭ್ರೂಣಹತ್ಯೆ, ಹೆಣ್ಣು ಮಕ್ಕಳನ್ನು ಹೆತ್ತದ್ದಕ್ಕೆ ಮಕ್ಕಳನ್ನೂ ಕೊಂದು ತಾಯಿಯೂ ಆತ್ಮಹತ್ಯೆ ಮಾಡಿಕೊಂಡ ಸುದ್ದಿಗಳನ್ನು ನಾವು ಪ್ರತಿ ನಿತ್ಯ ಪತ್ರಿಕೆಗಳಲ್ಲಿ ಓದುತ್ತಿದ್ದೇವೆ. ಮಹಿಳಾ ಸ್ವಾತಂತ್ರ್ಯದ ಕೊರತೆ, ಕಡಿಮೆ ಶಿಕ್ಷಣ ಮಟ್ಟ, ವೇಶ್ಯೆ ಮತ್ತು ದೇವದಾಸಿ ಚಟುವಟಿಕೆಗಳು, ಬಂಜೆತನ, ವಿಧವಾ ಸಮಸ್ಯೆಗಳು,ಮೂಢನಂಬಿಕೆಗಳು, ಬಹುಪತ್ನಿತ್ವ, ದುಡಿಯುವ ಮಹಿಳೆಯರ ಸಮಸ್ಯೆಗಳು ಎರಡನೆ ದರ್ಜೆಯ ಪ್ರಜೆಯ ಸ್ಥಾನಮಾನ, ವರದಕ್ಷಿಣೆ ಕಿರುಕುಳ ಮುಂತಾದ ಸಮಸ್ಯೆಗಳ ಸುಳಿಯಲ್ಲಿ ಮಹಿಳೆ ಸಿಕ್ಕಿ ಕೊಂಡಿದ್ದಾಳೆ.

ವರದಕ್ಷಿಣೆ ಪಿಡುಗು ಸ್ತ್ರೀ ಸಮಾಜವನ್ನು ನಿದ್ದೆಗೆಡಿಸಿದೆ. ವರದಕ್ಷಿಣೆ ತಾರದ ಸೊಸೆಯನ್ನು ಅತ್ತೆ, ಮಾವ, ಗಂಡ ಮತ್ತು ನಾದಿನಿಯರು ಹಿಂಸಿಸುವುದು ಸಾಮಾನ್ಯ ಸಂಗತಿಯಾಗಿದೆ. ಇಂಥ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಲಿಂಗ ಅಸಮಾನತೆಯನ್ನು ವಿಶ್ಲೇಷಿಸುವುದು ಅವಶ್ಯಕ.

## ಲಿಂಗಪ್ರಮಾಣದಲ್ಲಿ ಅಸಮಾನತೆ

ಭಾರತದಲ್ಲಿ ಲಿಂಗಪ್ರಮಾಣ ಒಂದು ಗಂಭೀರ ಕಾಳಜಿಯ ವಿಷಯವಾಗಿದೆ. ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಸಾವಿರ ಪುರುಷರಿಗೆ 972 ರಷ್ಟಿದ್ದ ಮಹಿಳೆಯರ ಸಂಖ್ಯೆ ಅದೇ ಶತಮಾನದ ಕೊನೆಯ ದಶಕದಲ್ಲಿ 927ಕ್ಕೆ ಬಂದು ನಿಂತಿದೆ. 2001ರ ಜನಗಣತಿಯಲ್ಲಿ ಈ ಸಂಖ್ಯೆ 933 ಕ್ಕೆ ಏರಿದ್ದು ಸ್ವಲ್ಪ ಉತ್ತಮ ಬೆಳವಣಿಗೆ ಕಂಡುಬಂದಿದೆ. ಆದರೆ ಬಾಲಕಿಯರ ಮಟ್ಟದಲ್ಲಿ ಹಾಗನಿಸುವುದಿಲ್ಲ. 0 - 6 ವಯೋಗುಂಪಿನ 1000 ಹುಡುಗರಿಗೆ ಕೇವಲ 927 ಮಂದಿ ಹುಡುಗಿಯರಿದ್ದಾರೆ. ಭಾರತದ ನೂರು ಕೋಟಿ ಜನಸಂಖ್ಯೆಯ ಕಾಲುಭಾಗ ಅಂದರೆ 25 ಕೋಟಿ 19 ವರ್ಷದೊಳಗಿನ ಹೆಣ್ಣುಮಕ್ಕಳಾಗಿದ್ದಾರೆ. ಹೆಣ್ಣುಮಕ್ಕಳು ಹುಡುಗರಿಗಿಂತ ಜೈವಿಕವಾಗಿ ಶಕ್ತಿವಂತರಾಗಿದ್ದರೂ ಸುಮಾರು 3 ಲಕ್ಷದಷ್ಟು ಮಂದಿ ಮರಣಿಸುತ್ತಾರೆ. ಇಪ್ಪತ್ತನೆಯ ಶತಮಾನದ ಭಾರತದಲ್ಲಿ ಆರ್ಥಿಕತೆ ಮತ್ತು ಮೂಲಭೂತ ಸೇವಾ ಸೌಲಭ್ಯಗಳು ಹೆಚ್ಚಿದ ನಂತರ ದಶಕದಿಂದ ದಶಕಕ್ಕೆ ಲಿಂಗಪ್ರಮಾಣ ಕ್ಷೀಣಿಸುತ್ತಾ ಬಂದಿದೆ. ಇದರಲ್ಲಿ ಕೇರಳ ರಾಜ್ಯ ಮಾತ್ರ ಮಹಿಳಾಪರವಾಗಿದೆ. ಆಂಧ್ರಪ್ರದೇಶ, ಗೋವಾ, ಹಿಮಾಚಲ ಪ್ರದೇಶ, ಕರ್ನಾಟಕ, ಮಣಿಪುರ, ಒರಿಸ್ಸಾ ಮತ್ತು ತಮಿಳುನಾಡು ರಾಜ್ಯಗಳಲ್ಲಿ ಲಿಂಗಪ್ರಮಾಣ 950 ಮತ್ತು ಅದಕ್ಕಿಂತ ಹೆಚ್ಚಾಗಿದೆ. ಆದರ ಉಳಿದ ಹದಿನೆಂಟು ರಾಜ್ಯಗಳಲ್ಲಿ ಪುರುಷರಿಗಿಂತ ಮಹಿಳೆಯರು ಶೇಕಡ 5ರಿಂದ 13ರಷ್ಟು ಕಡಿಮೆ ಇದ್ದಾರೆ.ಪರಿಶಿಷ್ಟ ವರ್ಗಗಳಲ್ಲಿ 972, ಪರಿಶಿಷ್ಟ ಜಾತಿಗಳಲ್ಲಿ 922 ಮತ್ತು ಸಾಮಾನ್ಯ ವರ್ಗಗಳಲ್ಲಿ 923ರ ಲಿಂಗಪ್ರಮಾಣವಿದೆ. ಬದುಕುಳಿಯುವ ಮಕ್ಕಳ ಅಂಕಿಅಂಶಗಳ ಪ್ರಕಾರ, ಪ್ರತಿ ಆರನೆಯ ಹೆಣ್ಣುಮಗು ಲಿಂಗತಾರತಮ್ಯದಿಂದಾಗಿ ಮರಣ ಹೊಂದುತ್ತದೆ. ಪ್ರತಿವರ್ಷ ಭಾರತದಲ್ಲಿ ಹುಟ್ಟುವ ಹೆಣ್ಣುಮಕ್ಕಳ ಸಂಖ್ಯೆ ಸುಮಾರು ಹನ್ನೆರೆಡು ದಶಲಕ್ಷ. ಅವರಲ್ಲಿ ಶೇಕಡ 25 ಹೆಣ್ಣುಮಕ್ಕಳು ತಮ್ಮ ಹದಿನೈದನೆಯ ಹುಟ್ಟುಹಬ್ಬವನ್ನು ಕಾಣುವುದಿಲ್ಲ. ಶೇಕಡ 10 ಹೆಣ್ಣುಮಕ್ಕಳು ತಮ್ಮ ಮೊದಲವರ್ಷದ ಹುಟ್ಟುಹಬ್ಬದವರೆಗೆ ಬದುಕುಳಿದಿರುವುದಿಲ್ಲ. ಮಧ್ಯಪ್ರದೇಶ, ರಾಜಾಸ್ಥಾನ, ಹರಿಯಾಣ ಮತ್ತು ಪಂಜಾಬ್ ರಾಜ್ಯಗಳಲ್ಲಿ ಲಿಂಗಪ್ರಮಾಣ ಕಡಿಮೆಯಿರುವ ಹತ್ತು ಜಿಲ್ಲೆಗಳು ತಮ್ಮದೇ ಆದ ಸಾಮಾಜಿಕ ಅಸಮತೋಲನವನ್ನು ಹೊಂದಿವೆಯೆಂದು ಹೇಳಲಾಗಿದೆ. ಇದು ಪುರುಷನಿರ್ಮಿತವೆನ್ನುವುದರಲ್ಲಿ ಎರಡು ಮಾತಿಲ್ಲ.

**ಆಯ್ದ ದೇಶಗಳಲ್ಲಿ ತಾಯಂದಿರ ಮರಣದರ 1997**

| ದೇಶ | 10,000 ಜನನಗಳಿಗೆ ಮರಣ ಸಂಖ್ಯೆ |
|---|---|
| ಭಾರತ | 437 |
| ಚೀನಾ | 115 |
| ಇಂಡೊನೇಷಿಯ | 390 |
| ಶ್ರೀಲಂಕ | 30 |
| ಪಾಕಿಸ್ಥಾನ | 340 |
| ಯುನೈಟೆಡ್ ಕಿಂಗ್‌ಡಮ್ | 9 |
| ಅಮೆರಿಕ | 12 |

ಪ್ರಖ್ಯಾತ ಅರ್ಥಶಾಸ್ತ್ರಜ್ಞರು ನೋಬಲ್ ಪಾರಿತೋಷಕ ಪುರಸ್ಕೃತರೂ ಆದ ಅಮರ್ತ್ಯಸೇನ್ ಅವರು ಏಳು ಬಗೆಯ ಲಿಂಗ ಅಸಮಾನತೆಯನ್ನು ಗುರುತಿಸಿದ್ದಾರೆ. ಅವುಗಳೆಂದರೆ : ಮರಣ ಅಸಮಾನತೆ, ಭ್ರೂಣಾವಸ್ಥೆ ಅಸಮಾನತೆ, ಮೂಲಭೂತ ಸೌಲಭ್ಯ ಅಸಮಾನತೆ, ವಿಶೇಷ ಅವಕಾಶ ಅಸಮಾನತೆ, ವೃತ್ತಿಪರ ಅಸಮಾನತೆ, ಮಾಲೀಕತ್ವ ಅಸಮಾನತೆ ಮತ್ತು ಕುಟುಂಬ ಅಸಮಾನತೆ.

**ಮರಣ ಅಸಮಾನತೆ :** ಪ್ರಪಂಚದ ಕೆಲವು ದೇಶಗಳಲ್ಲಿ ಪುರುಷ ಮತ್ತು ಮಹಿಳೆಯರ ಮರಣ ಪ್ರಮಾಣದಲ್ಲಿ ಅಸಮಾನತೆಯಿದೆ. ಮಹಿಳೆಯರ ಆರೋಗ್ಯದ ಕಡೆ ಅನಾಸಕ್ತಿ ಹೊಂದಿರುವುದರಿಂದ ಪುರುಷರಿಗಿಂತ ಮಹಿಳೆಯರ ಮರಣ ಪ್ರಮಾಣವು ಹೆಚ್ಚಾಗಿದೆ. ಇದರಿಂದ ಅಂತಹ ದೇಶಗಳ ಒಟ್ಟು ಜನಸಂಖ್ಯೆಯಲ್ಲಿ ಪುರುಷರ ಸಂಖ್ಯೆಯೇ ಅಧಿಕವಾಗಿದೆ. ಮಹಿಳೆಯರಿಗೆ ಉತ್ತಮ ಆಹಾರ ಒದಗಿಸಿ, ಹಲವು ಕಲ್ಯಾಣ ಕಾರ್ಯಕ್ರಮಗಳನ್ನು ಹೊಂದಿರುವ ದೇಶಗಳಲ್ಲಿ ಮಹಿಳಾ ಮರಣ ಪ್ರಮಾಣದಲ್ಲಿ ಇಳಿಕೆ ಕಂಡು ಬಂದಿದೆ. ಭಾರತ, ಚೀನಾ, ದಕ್ಷಿಣ ಏಷ್ಯಾ ಮತ್ತು ಉತ್ತರ ಅಮೇರಿಕಾದಲ್ಲಿ ಮರಣ ಅಸಮಾನತೆಯನ್ನು ವ್ಯಾಪಕವಾಗಿ ಕಾಣಬಹುದು.

**ವಯಸ್ಸು ಮತ್ತು ಲಿಂಗಾನುಸಾರ ಶೇಕಡಾವಾರು ಮರಣ ಪ್ರಮಾಣ - 1996**

| ವಯಸ್ಸು | ಗಂಡು | ಹೆಣ್ಣು |
|---|---|---|
| 1 ವರ್ಷಕ್ಕಿಂತ ಕಡಿಮೆ | 8.5 | 8.0 |
| 1 ರಿಂದ 4 | 2.6 | 3.0 |
| 5 ರಿಂದ 14 | 2.3 | 2.3 |

**ಭ್ರೂಣಾವಸ್ಥೆ ಅಸಮಾನತೆ :** ಜನರು ಸಾಮಾನ್ಯ ಹೆಣ್ಣು ಮಕ್ಕಳಿಗೆ ಬದಲಾಗಿ ಗಂಡು ಮಕ್ಕಳನ್ನು ಪಡೆಯಲು ಬಯಸುತ್ತಾರೆ. ಹುಟ್ಟುವ ಮೊದಲ ಮಗುವು ಗಂಡೇ ಆಗಿರಬೇಕೆಂಬ ಹಂಬಲ ಕಂಡುಬರುತ್ತದೆ. ಹೆಣ್ಣು ಮಗು ಜನಿಸದಿದ್ದರೆ ಯೋಚನೆಯನ್ನೇ ಮಾಡುವುದಿಲ್ಲ. ಗಂಡು ಮಗು ಜನಿಸದಿದ್ದರೆ ತಂದೆ-ತಾಯಿಗಳಿಗೆ ಸ್ವರ್ಗವೇ ಪ್ರಾಪ್ತವಾಗುವುದಿಲ್ಲವೆಂಬ ನಂಬಿಕೆ (ನಃಪುತ್ರಸ್ಯ ಗತಿರ್ವಾಸ್ತಿ) ಭಾರತದಲ್ಲಿ ಹೆಣ್ಣು ಭ್ರೂಣ ಹತ್ಯೆಗೆ ಉತ್ತೇಜನ ನೀಡುತ್ತದೆ. ಹೆಣ್ಣು ಶಿಶುವಿನ ಭ್ರೂಣ ಹತ್ಯೆಯು ಚೀನಾ, ದಕ್ಷಿಣ ಕೊರಿಯಾ,ಸಿಂಗಾಪುರ, ತೈವಾನ್, ಭಾರತ ಮತ್ತು ದಕ್ಷಿಣ ಏಷ್ಯಾದ ರಾಷ್ಟ್ರಗಳಲ್ಲಿ ವ್ಯಾಪಕವಾಗಿ ಕಂಡು ಬರುತ್ತಿದೆ. ಇದು ಹೈ-ಟೆಕ್ ಲಿಂಗ ತಾರತಮ್ಯವೇ ಆಗಿದೆ.

ಭಾರತದ ರಿಜಿಸ್ಟ್ರಾರ್ ಜನರಲ್‌ರವರ ಕಛೇರಿಯು 1993-94ರ ಸಾಲಿನಲ್ಲಾದ ಹೆಣ್ಣು ಭ್ರೂಣಗಳ ಗರ್ಭಪಾತ ಪ್ರಕರಣಗಳ ಸಂಖ್ಯೆ 3.6 ಲಕ್ಷಗಳೆಂದು ವರದಿಮಾಡಿತ್ತು.. ಇತ್ತೀಚಿನ ಅಂದಾಜಿನಂತೆ, ಪ್ರತಿವರ್ಷ ಸುಮಾರು ಆರು ದಶಲಕ್ಷ ಗರ್ಭಪಾತಗಳಾಗುತ್ತವೆ. ಅವುಗಳಲ್ಲಿ 4 ದಶಲಕ್ಷ ಗರ್ಭಪಾತಗಳು ಬಲವಂತದಿಂದಾದುವಾದರೆ, 2 ದಶಲಕ್ಷ ಗರ್ಭಪಾತಗಳು ಸಹಜವಾದವು. ಇದರಿಂದ ಶೇಕಡ 60 ರಷ್ಟು ಗರ್ಭಪಾತಗಳು ಹೆಣ್ಣುಭ್ರೂಣಗಳ ಗರ್ಭಪಾತಗಳೆಂದು ಅಂದಾಜಿಸಬಹುದು.

**ಮೂಲಭೂತ ಸೌಲಭ್ಯ ಅಸಮಾನತೆ :** ಪುರುಷ ಮತ್ತು ಮಹಿಳೆಯರಿಗಿರುವ ಮೂಲಭೂತ ಸೌಲಭ್ಯಗಳಲ್ಲಿ ತಾರತಮ್ಯವಿರುವುದು ಅನೇಕ ದೇಶಗಳಲ್ಲಿ ಕಂಡುಬಂದಿದೆ. ಹೆಣ್ಣು ಮಕ್ಕಳ ಓದಿಗೆ ಪ್ರೋತ್ಸಾಹ ನೀಡದಿರುವುದು, ಹೆಣ್ಣಿಗೇಕೆ ಓದು ಎಂದು ಅರ್ಧಕ್ಕೆ ಶಿಕ್ಷಣ ಬಿಡಿಸುವುದು ಸಾಮಾನ್ಯವಾಗಿದೆ. ಏಷ್ಯಾ, ಆಫ್ರಿಕಾ ಮತ್ತು ಲ್ಯಾಟಿನ್ ಅಮೇರಿಕಾದ ದೇಶಗಳಲ್ಲಿ ಹುಡುಗರಿಗಿಂತ ಹುಡುಗಿಯರಿಗೆ ಶಾಲಾ ಅವಕಾಶಗಳುಕಡಿಮೆ ಇದೆ. ಆಫ್‌ಘಾನಿಸ್ತಾನದ ಹಿಂದಿನ ತಾಲಿಬಾನ್ ಸರ್ಕಾರ ಮಹಿಳಾ ಶಿಕ್ಷಣವನ್ನು ವಿರೋಧಿಸುತಿತ್ತು. ಇಸ್ಲಾಂ ಧರ್ಮೀಯ ದೇಶಗಳಲ್ಲಿ ಮಹಿಳೆಯರಿಗಿರುವ ಸ್ವಾತಂತ್ರ್ಯ ಸ್ವಲ್ಪ ಕಡಿಮೆಯೇ ಎಂದರೆ ತಪ್ಪಾಗಲಾರದು. ಮಹಿಳೆಯರು ಬುರುಕ ಹಾಕಿ ತಿರುಗಾಡಬೇಕು. ದುಡಿಯುವ ಮಹಿಳೆಯರಿಗೆ ಪ್ರೋತ್ಸಾಹ ನಿರಾಶಾದಾಯಕವಾಗಿದೆ.

ಮಹಿಳೆಯರಿಗೆ ಪೌಷ್ಟಿಕ ಆಹಾರದ ಕೊರತೆಯಿದೆ. ಹಲವು ದೇಶಗಳಲ್ಲಿ ಮಹಿಳೆ ಮಗು ಹೆರುವ ಯಂತ್ರದಂತಿದ್ದುಕೊಂಡು ಮಕ್ಕಳ ಲಾಲನೆ ಪೋಷಣೆಯಲ್ಲಿ ಜೀವನವನ್ನು ಕಳೆಯುತ್ತಿದ್ದಾಳೆ. ಒಂದು ಹೆಣ್ಣು ಬಾಲ್ಯದಲ್ಲಿ ತಂದೆ-ತಾಯಿಯರ ಆಶ್ರಯದಲ್ಲಿ, ಯವ್ವನದಲ್ಲಿ ಗಂಡನ ಆಶ್ರಯದಲ್ಲಿ, ಮುಪ್ಪಿನಲ್ಲಿ ಮಕ್ಕಳ ಆಶ್ರಯದಲ್ಲಿರಬೇಕೆಂಬ ನಮ್ಮ ಜನರ ಧೋರಣೆ ಅವಳ ಸ್ವಾತಂತ್ರ್ಯ ಹರಣಕ್ಕೆ ನಾಂದಿಹಾಡಿದೆ. ಹೆಣ್ಣು ಮಕ್ಕಳಿಗೆ ಮದುವೆ ಮಾಡಿದರೆ ಆಯಿತು ಎನ್ನುವ ಭಾವನೆ ಅವರನ್ನು ಮೂಲಭೂತ ಸೌಲಭ್ಯಗಳಿಂದ ವಂಚಿತರನ್ನಾಗಿಸಿದೆ. ಆಸ್ತಿಯ ಹಕ್ಕು ನಮ್ಮಲ್ಲಿ ಕಾನೂನು ರೀತ್ಯ ಮಹಿಳೆಯರಿಗಿದ್ದರೂ ಬಹುತೇಕ ಕುಟುಂಬಗಳಲ್ಲಿ ಅವರಿಗೆ ತಂದೆ ಆಸ್ತಿಯಲ್ಲಿ ಪಾಲನ್ನೇ ನೀಡುತ್ತಿಲ್ಲ.

ಆಮ್ನಿಯೊಸೆಂಟಿಸಿಸ್ ಮತ್ತು ಅಲ್ಟ್ರಾಸಿನೊಗ್ರಫಿ-ಯಂಥ ತಂತ್ರಗಳು ಮಾನವ ಜನಾಂಗದ ಏಳಿಗೆಗೆ ಆಧುನಿಕ ವೈದ್ಯಕೀಯ ವಿಜ್ಞಾನದ ಕೊಡುಗೆಗಳೆಂದೇ ಭಾವಿಸಲಾಗಿತ್ತು. ಆದರೆ ಇಂದು ಈ ತಂತ್ರಜ್ಞಾನಗಳು ಲಿಂಗನಿರ್ಧಾರಕ್ಕಾಗಿ ದುರ್ಬಳಕೆಯಾಗುತ್ತಿದೆ. ಇದನ್ನು ಗಮನದಲ್ಲಿಟ್ಟುಕೊಂಡು 1994ರಲ್ಲಿ ಜನನಪೂರ್ವ ಪತ್ತೆ ಕಾರ್ಯ ತಂತ್ರಗಳ ಕಾಯಿದೆಯನ್ನು ಭಾರತದಲ್ಲಿ ಅಂಗೀಕರಿಸಿ 1996ರ ಜನವರಿಯಲ್ಲಿ ಜಾರಿಗೊಂಡಿದೆ. ಈ ಕಾಯಿದೆಯ ವಿವರ ಹೀಗಿದೆ :

- ಭ್ರೂಣದ ಲಿಂಗನಿರ್ಧಾರದ ಮೂಲಕ ಹೆಣ್ಣು - ಭ್ರೂಣಹತ್ಯೆಗೆ ಕಾರಣವಾಗುವ ಜನನಪೂರ್ವ ಲಿಂಗಪತ್ತೆಪರೀಕ್ಷೆ (PNDT) ಯ ದುರ್ಬಳಕೆಯ ನಿಷೇಧ.
- ಲಿಂಗಪತ್ತೆಕಾರ್ಯಕ್ಕಾಗಿ ಜನನಪೂರ್ವ ಲಿಂಗಪತ್ತೆ ಪರೀಕ್ಷೆಯ (PNDT) ಯ ನಿಷೇಧ.
- ನಿರ್ದಿಷ್ಟ ಅನುವಂಶೀಯ ವೈಪರೀತ್ಯ ಮತ್ತು ವಿರೂಪಗಳ ಪತ್ತೆಗಾಗಿ ಜನನಪೂರ್ವ ಲಿಂಗಪತ್ತೆ ಪರೀಕ್ಷೆಗೆ ಅನುಮತಿ ಮತ್ತು ಅದರ ನಿಯಂತ್ರಣ.
- ಈ ಕಾಯಿದೆಯಲ್ಲಿರುವ ನಿಯಮಗಳನ್ನು ಮೀರಿದವರಿಗೆ ಶಿಕ್ಷೆ.

**ವಿಶೇಷ ಅವಕಾಶಗಳ ಅಸಮಾನತೆ :** ಯುವ ಮಹಿಳೆಯರಿಗೆ ಮೂಲಭೂತ ಸೌಲಭ್ಯಗಳಲ್ಲಿ ಅವಕಾಶಗಳು ಕಡಿಮೆ ಇರುವುದರ ಜೊತೆಗೆ ಉನ್ನತ ಶಿಕ್ಷಣಗಳಂತಹ ವಿಶೇಷ ಅವಕಾಶಗಳೂ ಸಹ ಅಲ್ಪವಾಗಿವೆ. ಪ್ರಪಂಚದ ಶ್ರೀಮಂತ ದೇಶಗಳೂ ಸಹ ವೃತ್ತಿ ಪರ ಶಿಕ್ಷಣಗಳಲ್ಲಿ ಲಿಂಗ ಪೂರ್ವಾಗ್ರಹವನ್ನೊಂದಿದ್ದಾರೆ. ಯುದ್ಧ, ವ್ಯಾಪಾರ, ರಾಜಕಾರಣ,

ಅಂಗ ಸಾಧನೆಗಳಂತಹ ವೃತ್ತಿ ಪರ ಕ್ಷೇತ್ರಗಳು ಪುರುಷರಿಗೆ ಮಾತ್ರ ಸೀಮಿತವಾದವು ಎಂಬ ವಾದವನ್ನು ಬೆಂಬಲಿಸುವರ ಸಂಖ್ಯೆಗೇನೂ ಕೊರತೆಯಿಲ್ಲ. ಭಾರತ ಮತ್ತು ಏಷ್ಯಾದ ಹಲವು ರಾಷ್ಟ್ರಗಳಲ್ಲಿ ಇದೇ ತರಹದ ಭಾವನೆಗಳಿರುವುದು ಕಂಡು ಬಂದಿದೆ.

**ವೃತ್ತಿಪರ ಅಸಮಾನತೆ :** ಉದ್ಯೋಗಗಳ ಮೀಸಲಾತಿ ಮತ್ತು ಬಡ್ತಿ ವಿಷಯಗಳಲ್ಲಿ ಮಹಿಳೆಯರು ಪುರುಷರಿಗಿಂತ ಹೆಚ್ಚು ಸಂಕಷ್ಟಗಳನ್ನು ಅನುಭವಿಸುವರು. ಒಂದು ಕಂಪನಿಯ ಉನ್ನತ ಸ್ಥಾನವನ್ನು ಮಹಿಳೆಯರಿಗೆ ಮೀಸಲಿಡುವುದು ಅಪರೂಪವೇ ಸರಿ. ಮೂಲಭೂತ ಸೌಕರ್ಯ ಕಲ್ಪಿಸುವುದರಲ್ಲಿ ಮತ್ತು ಉನ್ನತ ಶಿಕ್ಷಣ ನೀಡುವುದರಲ್ಲಿ ಲಿಂಗ ಅಸಮಾನತೆಯನ್ನು ಸಹಿಸದ ಜಪಾನ್ ನಂತಹ ದೇಶದಲ್ಲೂ ಉದ್ಯೋಗ ಮತ್ತು ಬಡ್ತಿ ವಿಷಯಕ್ಕೆ ಬಂದಾಗ ಮಹಿಳೆಯರು ಪುರುಷರಿಗಿಂತ ಹೆಚ್ಚು ತಾರತಮ್ಯ ಮತ್ತು ಕಷ್ಟಕಾರ್ಪಣ್ಯಗಳನ್ನು ಎದುರಿಸುತ್ತಿರುವುದು ಕಂಡು ಬಂದಿದೆ. ಈ ವಿಚಾರದಲ್ಲಿ ಅಭಿವೃದ್ಧಿ ಹೊಂದಿದ ಇತರ ದೇಶಗಳಲ್ಲಿಯೂ ಇದೇ ಪರಿಸ್ಥಿತಿ ಇರುವುದು ಗೋಚರವಾಗಿದೆ.

**ಮಾಲಿಕತ್ವ ಅಸಮಾನತೆ :** ಮಹಿಳೆಯರ ಆಸ್ತಿ ಮಾಲಿಕತ್ವ ವಿಚಾರದಲ್ಲಿಯೂ ಸಹ ಬಹುತೇಕ ರಾಷ್ಟ್ರಗಳಲ್ಲಿ ಹೆಚ್ಚು ಅಸಮಾನತೆಯಿದೆ. ಸಾಂಪ್ರದಾಯಿಕ ಆಸ್ತಿಗಳಾದ ಮನೆ ಮತ್ತು ಭೂಮಿ ಸಹ ವ್ಯಾಪಕವಾಗಿ ಅಸಮಾನವಾಗಿ ಹಂಚಿಕೆಯಾಗಿವೆ. ಹಲವು ಸಂದರ್ಭಗಳಲ್ಲಿ ಮಹಿಳೆಯರಿಗೆ ಆಸ್ತಿ ನಿರಾಕರಣೆ ಮಾಡಿರುವುದೂ ಇದೆ. ಆಸ್ತಿ ಹಕ್ಕಿನಲ್ಲಿರುವ ನ್ಯೂನ್ಯತೆಗಳು ಮಹಿಳೆಯರ ದನಿಯನ್ನು ತಗ್ಗಿಸಿದೆ. ವ್ಯಾಪಾರ, ವಾಣಿಜ್ಯ ಚಟುವಟಿಕೆಗಳಲ್ಲಿ ಅವರ ಮಾಲಿಕತ್ವ ಕಡಿಮೆಯಿದೆ. ಭಾರತದ ಬಹುತೇಕ ಕಡೆಗಳಲ್ಲಿ ಸಾಂಪ್ರದಾಯಕ ಆಸ್ತಿಹಕ್ಕುಗಳು ಪುರುಷರ ಪರವಾಗಿಯೇ ಇವೆ. ಆದರೆ ಕೇರಳ ರಾಜ್ಯದ ನಾಯರ್ ಮತ್ತು ದಕ್ಷಿಣಕನ್ನಡ ಜಿಲ್ಲೆಯ ಬಂಟ್ಸ್ ಸಮುದಾಯಗಳಲ್ಲಿ ಆಸ್ತಿ ಹಕ್ಕು ಅನುವಂಶೀಯವಾಗಿ ಮಾತೃ ಪ್ರಧಾನವಾಗಿರುವುದನ್ನು ಕಾಣಬಹುದು.

**ಕುಟುಂಬ ಅಸಮಾನತೆ :** ಕುಟುಂಬದ ಲಿಂಗ ಸಂಬಂಧಗಳಲ್ಲಿ ಅಸಮಾನತೆಯಿದೆ. ಹೆಣ್ಣು ಮಕ್ಕಳಿಗೆ ಉನ್ನತ ಶಿಕ್ಷಣ ಕೊಡಿಸುವಲ್ಲಿ ಹಿಂಜರಿಕೆಯಿದೆ. ಉದ್ಯೋಗಗಳ ಆಯ್ಕೆಯಲ್ಲಿ ತಂದೆ ಅಥವಾ ಗಂಡನ ಪಾತ್ರವೇ ಹೆಚ್ಚು. ಪುತ್ರ ಒಲವು ಎಲ್ಲೆಡೆ ಹೆಚ್ಚಾಗಿದೆ. ಗಂಡು ಮಕ್ಕಳ ಶಿಕ್ಷಣಕ್ಕೆ ಮಾಡುವ ಖರ್ಚನ್ನು ಬಂಡವಾಳ ಹೂಡಿಕೆಯೆಂದು ತಿಳಿದರೆ, ಹೆಣ್ಣು ಮಕ್ಕಳಿಗೆ ಆಗುವ ಖರ್ಚು ವ್ಯರ್ಥ ಎಂದು ಭಾವಿಸುವವರೂ ಇದ್ದಾರೆ. ಮನೆಗೆಲಸ ಮತ್ತು ಮಕ್ಕಳ ಲಾಲನೆ- ಪಾಲನೆ ಮಹಿಳೆಯರ ಕೆಲಸವೆಂದೂ, ಮನೆಯಿಂದ ಹೊರಗೆ ದುಡಿದು ಸಂಸಾರ ನಡೆಸುವುದು ಪುರುಷರ ಜವಾಬ್ದಾರಿಯೆಂದು ತಿಳಿಯಲಾಗಿದೆ.. ದುಡಿಯುವ ಆಧುನಿಕ ಮಹಿಳೆ ಮನೆ ಮತ್ತು ಹೊರಗೆ ದುಡಿದು ಸಂಸಾರ ನಡೆಸುವುದು ಪುರುಷರ ಜವಾಬ್ದಾರಿಯೆಂದು ತಿಳಿಯಲಾಗಿದೆ. ದುಡಿಯುವ ಆಧುನಿಕ ಮಹಿಳೆ ಮನೆ ಮತ್ತು ಹೊರಗೆ ಎರಡೂ ಕಡೆ ದುಡಿದು ಶೋಷಣೆಗೊಳಗಾಗುತ್ತಿದ್ದಾಳೆ. ವಿಶ್ವ ಆರೋಗ್ಯ ಸಂಸ್ಥೆ ತನ್ನ ಕೈಪಿಡಿಯೊಂದರಲ್ಲಿ ಮನೆಗೆಲಸಕ್ಕೆ ಅತ್ಯಲ್ಪ ಶಕ್ತಿ ಸಾಕು ಎಂದು ಹೇಳಿರುವುದನ್ನು ಅಮರ್ತ್ಯ ಸೇನ್ ಅವರು ಕಟುವಾಗಿ ಟೀಕಿಸುವುದರ ಮೂಲಕ ಮಹಿಳೆಯರ ಶ್ರಮಕ್ಕೆ ಹೆಚ್ಚಿನ ಮೌಲ್ಯವಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಗಂಡು ಮಕ್ಕಳನ್ನು ಪಡೆಯದ ತಾಯಂದಿರು ಕುಟುಂಬದವರ ಅವಕೃತೆಗೆ ಗುರಿಯಾಗುವರು. ಮಕ್ಕಳನ್ನೇ ಹಡೆಯದವರು 'ಬಂಜೆ' ಎಂಬ ಬಿರುದನ್ನು ಪಡೆಯುವರು. ಸಂತಾನ ಹರಣ ಶಸ್ತ್ರ ಚಿಕಿತ್ಸೆಗಳನ್ನು ಪುರುಷರು ಮಾಡಿಸಿಕೊಳ್ಳದೆ ಮಹಿಳೆಯರ ಮೇಲೆ ಹೇರುವುದು ಲಿಂಗ ಅಸಮಾನತೆಯ ಇನ್ನೊಂದು ಮುಖವಾಗಿದೆ.

**ಶಿಕ್ಷಣದ ವಿವಿಧ ಹಂತಗಳಲ್ಲಿ ಭಾರತದ ಬಾಲಕಿಯರು 1997 - 98**

| ಹಂತ | ಶೇಕಡಾವಾರು | ವೃತ್ತಿಪರ ಶಿಕ್ಷಣ | ಶೇಕಡಾವಾರು ಬಾಲಕಿಯರು |
|---|---|---|---|
| ಪೂರ್ವ ಪ್ರಾಥಮಿಕ | 45 | ಇಂಜನಿಯರಿಂಗ್ ಮತ್ತು ತಾಂತ್ರಿಕ | 16.9 |
| ಪ್ರಾಥಮಿಕ | 43.6 | - | - |
| ಮಾಧ್ಯಮಿಕ<br>ಪ್ರೌಢ<br>ಪದವಿ | 40.1<br>37.4<br>38.6 | ಎಂ.ಬಿ.ಬಿ.ಎಸ್<br>ಬಿಎಡ್/ಬಿ.ಟಿ<br>ಪಿಎಚ್‌ಡಿ/ ಡಿ ಫಿಲ್/ ಡಿ ಎಸ್ಸಿ | 36.5<br>43.4<br>30.0 |
| ಸ್ನಾತಕೋತ್ತರ | 39.8 | ಜೆ.ಬಿ.ಟಿ.<br>ಪಾಲಿಟೆಕ್ನಿಕ್<br>ಐ.ಟಿ.ಐ | 44.9<br>16.0<br>14.5 |

ಮಹಿಳಾ ಶೋಷಣೆಯ ನಿಯಂತ್ರಣ ಮತ್ತು ಸಮಾನತೆಯ ಕನಸು ಉತ್ತಮ ಮಾನವೀಯ ಶಿಕ್ಷಣ ಮತ್ತು ಮನಃ ಪರಿವರ್ತನೆಯಿಂದ ಮಾತ್ರ ಸಾಧ್ಯವಾಗಬಹುದು. ಸ್ತ್ರೀ ಶಿಕ್ಷಣ, ಮಹಿಳಾಆರ್ಥಿಕ ಸ್ವಾವಲಂಬನೆ ಮತ್ತು ಸ್ತ್ರೀಪರ ಶಾಸನಗಳಿಂದ ಸಮಾಜದಲ್ಲಿ ಸಮಾನತೆಯ ಕ್ರಾಂತಿಯನ್ನು ಸಾಧಿಸಬಹುದು.

**ಅಡಿ ಟಿಪ್ಪಣಿ :**

1. ಡಾ. ಕೃಷ್ಣಮೂರ್ತಿ ಹನೂರು, ಮುನ್ನುಡಿ ಬರಹ- ಮಹಿಳಾ ಅಧ್ಯಯನಗಳು : ಆರ್ಥಿಕ ನೆಲೆಗಳು ಮತ್ತು ಆಯಾಮಗಳು ಓ.ಡಿ. ಹೆಗ್ಗಡೆ ಮತ್ತು ಅನ್ನಪೂರ್ಣೇಶ್ವರಿ, ಮೊದಲ ಮುದ್ರಣ 2003, ಪುಟ - 6 ಮತ್ತು 7.

**ಪರಾಮರ್ಶನ ಗ್ರಂಥಗಳು :**


1 Sen A.K(2000) **'Seven Types of Gender Inequality'**. The Week Magazine

2. ಓ.ಡಿ. ಹೆಗ್ಗಡೆ ಮತ್ತು ಅನ್ನಪೂರ್ಣೇಶ್ವರಿ.ಎನ್ (2003) 'ಮಹಿಳಾ ಅಧ್ಯಯನಗಳು : ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ನವ ಭಾರತೀ ಪ್ರಕಾಶನ , ಮೈಸೂರು.

3. ಡಾ.ದಯಾನಂದ, 'ಸಾಮಾಜಿಕ ಬದಲಾವಣೆಯಲ್ಲಿ ಮಹಿಳೆಯ ಪಾತ್ರ'. ವಿಜಯಾನ್ವೇಷಣ, ಸಂ.ಡಾ.ಎಸ್.ಡಿ.ಶಶಿಕಲಾ ಮತ್ತು ಇತರರು, ಮೊದಲ ಮುದ್ರಣ 2004.



**ಡಾ.ದಯಾನಂದ**
ಉಪನ್ಯಾಸಕ
ಮಹಾರಾಣಿ ಸರ್ಕಾರಿ ಪದವಿ ಪೂರ್ವ ಕಾಲೇಜು
ಎನ್.ಎಸ್.ರಸ್ತೆ. ಮೈಸೂರು - 570 024


# ಮಹಿಳೆ, ಧರ್ಮ, ಮಾಧ್ಯಮ ಇತ್ಯಾದಿ

**ಡಾ.ಕೆ.ಎಸ್.ರತ್ನಮ್ಮ,ಮೈಸೂರು**

ಭಾರತೀಯ ಸಮಾಜದಲ್ಲಿ ಮಹಿಳಾ ಸ್ಥಿತಿ-ಗತಿಗಳು ಉತ್ತಮವಾಗುತ್ತಿದೆ ಎಂಬುದು ನಿರೀಕ್ಷಿತ ಸುಧಾರಣೆಯೇನೂ ಅಲ್ಲ. ಬಡತನ ಅಸಮಾನತೆ, ಲಿಂಗಭೇದಗಳ ಅಭದ್ರತೆಯ ಮುಷ್ಠಿಯಲ್ಲಿ ನಲುಗುತ್ತಿರುವವರ ಸಂಖ್ಯೆ ವಿಶ್ವದಲ್ಲೇ ಹೆಚ್ಚುತ್ತಾ ಇರುವ ಪ್ರಸ್ತುತದಲ್ಲಿ ಭಾರತೀಯ ಸಮಾಜದಲ್ಲಿ ಅವಳ ಸ್ಥಾನಮಾನಗಳಿರಲಿ, ಮಾನವ ಹಕ್ಕುಗಳ, ಅದರಲ್ಲೂ ಮಹಿಳಾ ಹಕ್ಕುಗಳ ಸಂರಕ್ಷಣೆಯು ಮತ್ತೊಂದು ಸಮಸ್ಯೆಯಾಗಿ ಕಾಡುತ್ತಿರುವುದು ವಾಸ್ತವವೇ ಆಗಿದೆ.

ಇತಿಹಾಸದ ಉದ್ದಕ್ಕೂ ಪುರುಷ ಪ್ರಪಂಚದ ಶೋಷಣೆಯ ಬಲೆಯೊಳಗೆ, ವರ್ಣಮಯ ಶೃಂಖಲೆಗಳೊಳಗೆ ಸಿಲುಕಿದ್ದ ಮಹಿಳೆಯ ಅಭಿವ್ಯಕ್ತಿಯೂ ಕುಂಠಿತವಾಗಿತ್ತು. ಅವಳ ಸಮಾನತೆಯ ಹಕ್ಕು, ಶಿಕ್ಷಣದ ಹಕ್ಕುಗಳೂ ಸಹಾ ಕಸಿಯುಲ್ಪಟ್ಟಿದ್ದವು. ಆಧುನಿಕ ಕಾಲದ ವಸಾಹತುಶಾಹಿ ಸಂದರ್ಭದಲ್ಲಿನ ಶಿಕ್ಷಣದ ಅವಕಾಶ ವೈಚಾರಿಕ ಸಂಸ್ಪರ್ಶದಿಂದ ತನ್ನತನದ ಬೆಳವಣಿಗೆ, ಸ್ವ ಅರಿವುಗಳ ಮೂಲಕ ಕಣ್ತೆರೆಯಲು ಎಡೆ ನೀಡಿತು. ಇದರ ಜೊತೆಗೆ ಸಮಾಜದ ಮೂಢನಂಬಿಕೆಗಳು, ಸಾಂಪ್ರದಾಯಕ ಆಚರಣಾ ವಿಧಿಗಳು ಮತ್ತೆ ಮತ್ತೆ ಮಹಿಳೆಯರನ್ನು ಹಿಂದಕ್ಕೆ ಸರಿಸುವತ್ತ ಕಟ್ಟುಪಾಡುಗಳಾಗಿ ಉಳಿದುಕೊಂಡೇ ಬಂದಿವೆ. ಮಹಿಳಾ ಜಗತ್ತಿನ ಒಳನೋವುಗಳು ಕಾರ್ಪಣ್ಯಗಳು ಮೂಲ ಅಸಂಖ್ಯವಾಗಿವೆ. ಅವುಗಳ ಹಿಂದಿನ ಕಾರಣಗಳನ್ನು ಹುಡುಕುವುದರೊಡನೆ ಅವುಗಳ ಫಲವಾಗಿ ಮಹಿಳೆಯರು ಅನುಭವಿಸುತ್ತಿರುವ ದುಗುಡಗಳ ಚಿತ್ರಣ ನೈಜ ಸತ್ಯ ಘಟನೆಗಳಲ್ಲಿ ಹೊರಬೀಳುತ್ತಲೇ ಇವೆ. ಸಮಾಜದ ಎಲ್ಲ ಶೋಷಣೆಗಳ ಮೊದಲ ಬಲಿ ಮಹಿಳೆಯೇ ಆಗಿರುವುದು ಕೇವಲ ಪಕ್ಷಪಾತ ಸ್ತ್ರೀವಾದ ನಿಲುವಿನ ಘೋಷಣೆಗಳು ಎಂದು ತಳ್ಳಿಹಾಕುವವರಿಗೆ ನಿದರ್ಶನ ರೂಪದ ಸತ್ಯವನ್ನು ಸಾರಿ ಹೇಳುತ್ತವೆ ಇಂತಹ ಘಟನೆಗಳು.

ಸಮಾಜದಲ್ಲಿ ಬೇರು ಬಿಟ್ಟಿರುವ ಮೌಢ್ಯಗಳ ನಿವಾರಣೆ ಪ್ರಯತ್ನ ಇಂದು ನಿನ್ನೆಯದಲ್ಲ. ಮಾನವ ಸಮಾಜದಲ್ಲಿ ಜಾಗೃತಿ ಉಂಟಾದಾಗಿನಿಂದಲೂ ನಡೆದೇ ಇದೆ. ಅದರಲ್ಲೂ ಸಮಾಜದಲ್ಲಿ ಸ್ತ್ರೀಯರ ಬಗ್ಗೆ ಮಾಡಿದ ಜಾಗೃತಿ ತೀರಾ ಇತ್ತೀಚಿನದು. ಮಹಿಳಾ ಸಮಸ್ಯೆಗಳನ್ನು ಎತ್ತಿ ಹಿಡಿಯಲು ಪತ್ರಿಕೆಗಳು ವಹಿಸಿದ ಪಾತ್ರ, ಮಾಧ್ಯಮಗಳ ಬೆಂಬಲ ಪ್ರಸ್ತುತದಲ್ಲಿ ಅತ್ಯಂತ ತೀವ್ರವೂ ಅಗತ್ಯವೂ ಆದುದು ಎಂಬುದನ್ನು ಸ್ತ್ರೀಯರ ಜಾಗೃತಿಯ ಜತೆಜತೆಗೆ ಪರಿಗಣಿಸಬೇಕಾದ ಸಂದರ್ಭಗಳು ಹೆಚ್ಚುತ್ತಿವೆ. ಸಾಮಾಜಿಕ ಕಂದಾಚಾರ ಪದ್ಧತಿಗಳು ಮಹಿಳಾ ಅಭಿವೃದ್ಧಿಗೆ ಮಾರಕವಾಗಿರುವುದು ವಿಷಾದನೀಯ ಅಂಶವೇ ಸರಿ. ಮಹಿಳಾ ಸಂಘಟನೆಗಳೂ ಗ್ರಾಮಾಂತರ ಪ್ರದೇಶಗಳಲ್ಲಿ ಮಹಿಳಾ ಜಾಗೃತಿಗೆ ಕಾರಣವಾಗಿವೆ. ಆದರೂ ಹೇಗೋ ಏನೋ, ಏಕೋ ಹೇಗೋ ನಾನಾಬಗೆಯ ಸಂಕಷ್ಟಗಳಲ್ಲಿ ಮಹಿಳೆಯರು ಮುಳುಗುತ್ತಲೇ ಇರುವುದು ಕಂಡುಬರುತ್ತಿದೆ.

ಇತ್ತೀಚಿನ ದಿನಗಳಲ್ಲಿ ಅಧಿಕಾರ ವಿಕೇಂದ್ರಕರಣದ ಫಲವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಮಹಿಳೆಯರು ಮೀಸಲಾತಿ ಸೌಲಭ್ಯದ ಫಲ ಪಡೆದಿದ್ದಾರೆ. ಆಡಳಿತ ವ್ಯವಸ್ಥೆಯಲ್ಲಿ ಅಲ್ಪ ಸ್ವಲ್ಪ

ಜ್ಞಾನದಲ್ಲಿಯೇ ಪಾಲುದಾರಳಾಗಿದ್ದಾರೆ. ಮಹಿಳಾ ಸ್ವಸಹಾಯ ಸಂಘಗಳು ಎಲ್ಲೆಡೆ ಪ್ರಾರಂಭವಾಗಿ ಸ್ವಾವಲಂಬನೆಯ ಸವಿಯನ್ನು ಅನುಭವಿಸುತ್ತಿದ್ದಾರೆ. ಮಹಿಳೆಯರಲ್ಲಿ ಜೀವನ ಉತ್ಸಾಹ ಗರಿಗೆದರಿದೆ. ಆತ್ಮವಿಶ್ವಾಸ ತುಂಬಿದೆ. ಆರ್ಥಿಕತೆಯಿಂದ ಕುಟುಂಬದ ಅಭಿವೃದ್ಧಿಗೆ ಮಹಿಳೆ ನೇರವಾಗಿ ಕಾರಣಳೂ ಆಗುತ್ತಿರುವ ಹೆಮ್ಮೆಯನ್ನುಂಟು ಮಾಡುವ ವಿಚಾರಗಳು ಕಾಣಬರುತ್ತಿವೆ. ಇಷ್ಟಾದರೂ ಮಹಿಳೆಯರನ್ನು ಶೋಷಿಸಲು ಸಾಮಾಜಿಕ ವ್ಯವಸ್ಥೆ ಕಾಯುತ್ತಲೇ ಇರುತ್ತದೋ ಏನೋ ಎಂಬಂತೆ ಶೋಷಣೆಯ ನಾನಾ ಮುಖವಾಗಿ ಹರಡುತ್ತಿವೆ. ಪಟ್ಟಣಗಳಲ್ಲಿನ ಹೆಣ್ಣು ಮಕ್ಕಳ ಶೋಷಣೆಯ ಚಿತ್ರ ಒಂದು ವಿಧವಾದರೆ ಗ್ರಾಮಾಂತರ ಪ್ರದೇಶಗಳಲ್ಲಿ ಮತ್ತೊಂದು ಪರಿಯಲ್ಲಿ ಹಲವು ಪರಿಗಳಲ್ಲಿ ದುಗುಡವಿರುತ್ತದೆ ಎಂಬುದು ವೇದನೆಯ ವಿಷಯ.

ಗ್ರಾಮ ಪಂಚಾಯಿತಿಯೊಂದು ವಿಧಿಸಿದ ಆದೇಶ ಹೆಣ್ಣೊಬ್ಬಳ ಜೀವನಕ್ಕೆ ಮುಳುವಾಗಿರುವ ಒಂದು ಪ್ರಕರಣವು ಡೆಕನ್ ಹೆರಾಲ್ಡ್ ಪತ್ರಿಕೆಯಲ್ಲಿ ಇತ್ತೀಚೆಗೆ ವರದಿಯಾಗಿರುವುದನ್ನು ಗಮನಿಸಿದಾಗ ಉಂಟಾದ ತಲ್ಲಣಗಳೇ ಅಸಹನೀಯ. ಇಂಥಹುದರಲ್ಲಿ ಮೂಢನಂಬಿಕೆಯ ಸಂಪ್ರದಾಯವನ್ನು ಆಧರಿಸಿದ ಇಂತಹ ಶೋಷಣೆಗಳು ಹೆಣ್ಣಿನ ಖಾಸಗಿ ಬದುಕಿನ ಹಕ್ಕನ್ನು ಕಸಿದುಕೊಳ್ಳುವತ್ತ ಕರಾಳ ಕೈಚಾಚಿರುವುದು ವಿಪರ್ಯಾಸದ ಸಂಗತಿ, ಹೆಣ್ಣಿನ ಜೀವನಕ್ಕೆ ಸವಾಲಾಗುತ್ತಿರುವ ಮಾನವ ಹಕ್ಕುಗಳ ಉಲ್ಲಂಘನೆಗೂ ಮೂಲವಾಗಿರುವ ಇಂತಹ ಕೃತ್ಯಗಳನ್ನು ಎಲ್ಲರೂ ವಿರೋಧಿಸ ಬೇಕಾಗಿದೆ.

ಸೋನಿಯಾ ಎಂಬ ಯುವತಿ ಅಸ್ಸಾಂದ ಎಂಬ ಪುಟ್ಟ ಹಳ್ಳಿಯಲ್ಲಿ ಗಂಡನೊಡನೆ ಸಂತೋಷದಿಂದ ಜೀವನ ಸಾಗಿಸುತ್ತಿದ್ದಳು. ತಾಯಿಯಾಗುವ ಸುದಿನವನ್ನು ಇದಿರು ನೋಡುತ್ತ ಕನಸು ಕಾಣುತ್ತಿದ್ದಾಕೆ. ಆ ಊರಿನಲ್ಲಿ ಬಹುಪಾಲು ರಾಟಿ ಎಂಬ ಉಪಜಾತಿಯ ಜನರೇ ವಾಸವಾಗಿದ್ದಾರೆ. ಅಷ್ಟೇನೂ ಅಶುದ್ಧತೆಯಿಲ್ಲದ ಅಲ್ಲಿನ ವಾತಾವರಣದಲ್ಲಿ ಹೀಗೊಂದು ಘಟನೆ ನಡೆದಿದೆ.

ಆ ಊರಿನ ಪಂಚಾಯಿತಿಯವರು ತೀರ್ಮಾನದಂತೆ ಎರಡು ವರ್ಷಗಳ ದಾಂಪತ್ಯ ಜೀವನ ನಡೆಸಿದರೂ ಸೋನಿಯಾಗೆ ಪತಿಯು ಸೋದರನಾಗಬೇಕೆಂದೂ, ಅವರದು ತಪ್ಪು ಗೋತ್ರದ ವಿವಾಹವೆಂದೂ ಒಪ್ಪಿಕೊಂಡು ಆ ವಿವಾಹವನ್ನು ಮುರಿಯಲು ಅಥವಾ ತ್ಯಜಿಸಿ ಹೊರಬರುವಂತೆ ವಿಧಿಸಿದ್ದರು, ಹೀಗೆ ಅಲ್ಲಿನ ಅಶಿಕ್ಷಿತ ಅಥವಾ ಅರ್ಧಶಿಕ್ಷಿತ ಹಿಂದುಳಿದ ಜನರು ವ್ಯವಸ್ಥೆಯ ದಬ್ಬಾಳಿಕೆಯಿಂದ ಆಕೆಯನ್ನು ಪ್ರತ್ಯೇಕವಾಗಿರಲು ಆದೇಶ ನೀಡಿತು. ಸೋನಿಯಾಳಿಗೆ ಈ ಬೆದರಿಕೆಯ ಆಘಾತದಿಂದ ಗರ್ಭಪಾತವಾಗುವಷ್ಟು ಪರಿಣಾಮವಾಯಿತು. ಅವಳ ಗಂಡ ಮತ್ತು ಮನೆಯವರು ಭಯದಿಂದ ತತ್ತರಿಸಿದರು.

ಈ 'ಗೋತ್ರ'ದ ಸಮಸ್ಯೆ ಸಾಂಪ್ರದಾಯಿಕತೆ ಸೃಷ್ಟಿಸಿದ್ದು, ಇದೊಂದು ಹಿಂದುಳಿದ ವ್ಯವಸ್ಥೆಯೂ ಆಗಿದೆ. ಪಟ್ಟಣಗಳಲ್ಲಿ ಈ ಕುರಿತು ಯಾರೂ ಗಮನ ಹರಿಸುತ್ತಿಲ್ಲ. ಆದ್ದರಿಂದ ಈ ಅಂಧ ಸಂಪ್ರದಾಯದಿಂದ ಬಿಡುಗಡೆ ಆದಂತಿದೆ. ಆದರೆ ಹಳ್ಳಿಗಳಲ್ಲಿ ಇದೊಂದು ಪಿಡುಗಾಗಿ ಉಳಿದಿದೆ. ನಾಗರಿಕ ಸಮಾಜದಲ್ಲಿ ಬದುಕಿದರೂ ಪ್ರಾಣಿಗಳಿಗೂ ಅಯೋಗ್ಯವಾದ ಪರಿಸ್ಥಿತಿಯಲ್ಲಿ ಬಾಳುತ್ತಾ ಇತರ ಜನರ ಖಾಸಗೀ ಬದುಕುಗಳಲ್ಲಿ, ಅದರಲ್ಲೂ ಹೆಣ್ಣಿನ ಜೀವನದಲ್ಲಿ ಸಮಸ್ಯೆಯನ್ನು ಸೃಷ್ಟಿಸಿ, ಅದರಲ್ಲಿ ಪ್ರವೇಶಿಸುತ್ತಿರುವ ಮೌಢ್ಯಕ್ಕೆ ಅಂತ್ಯವೆಂದು ? ಇದಕ್ಕೆ ನೆಮ್ಮದಿಯ ಕುಟುಂಬವೊಂದನ್ನು, ಅದರ ನೆಮ್ಮದಿಯನ್ನೂ ನಾಶಮಾಡುವ ವ್ಯವಸ್ಥೆಯ ಅಧಿಕಾರ ನೀಡಿದವರಾರು ? ಇದಕ್ಕೆ ಪರಿಹಾರವಿಲ್ಲವೇ? ಎಂಬುದು ಗಹನ ಸಮಸ್ಯೆಯೇ ಆಗಿದೆ.

ಗ್ರಾಮಪಂಚಾಯಿತಿಯ ಸರಪಂಚನು ಆಕೆಯ ಮನೆಗೆ ಹೋಗಿ ಪಂಚಾಯಿತಿಯ ನಿರ್ಣಯ ತಿಳಿಸಿ ಸೋನಿಯಾಳನ್ನು ಅಪಮಾನಗೊಳಿಸಿದ ರೀತಿ ನಾಗರಿಕ ಸಮಾಜ ತಲೆತಗ್ಗಿಸುವಂಥಾದ್ದು. ಗ್ರಾಮಪಂಚಾಯಿತಿಯು ಆ ಸದಸ್ಯನಿಗೆ ಅದೇನು ಆದೇಶ ನೀಡಿತ್ತೋ ? ಅವಳ ದುಪಟ್ಟಾ ಸೆಳೆದುಕೊಂಡುದಲ್ಲದೆ ಅವಳನ್ನು ಅವಳದೇ ಮನೆಯಿಂದ ಹೊರ ಹೋಗಲು ಆದೇಶ ನೀಡಿದನು ಇದಕ್ಕೆ ಸ್ಥಳೀಯ ಜನರ ಒತ್ತಡವೂ ಇದ್ದು ಆಕೆಗೆ ಈ ಶಿಕ್ಷೆಯಂತೆ! ಅವರ ಪ್ರಕಾರ ಸೋನಿಯಾ ಮತ್ತು ಅವಳ ಗಂಡನ ವಿವಾಹವು ತಪ್ಪು ಆಚರಣೆ. ಇದು ಹಳ್ಳಿಯ ಜೀವನವನ್ನು ಅಸ್ತವ್ಯಸ್ತಗೊಳಿಸಿ ಪರಿಣಾಮ ಬೀರುತ್ತದೆ ಎಂಬ ಹುಚ್ಚುವಾದ. ಹೀಗೆ ಸಂಪ್ರದಾಯದ ಆಚರಣೆಗೆ ಆಡಳಿತಶಾಹಿಯ ಬೆಂಬಲವೂ ಸೇರಿ ಮಾನವ ಹಕ್ಕುಗಳ ಎಲ್ಲೆಯನ್ನೂ ಮೀರಿ ವರ್ತಿಸುವ ಹೇಯ ಕೃತ್ಯಕ್ಕೆ ಯಾರು ಬಲಿ ? ಒಬ್ಬ ಅಮಾಯಕ ಹೆಣ್ಣುಮಗಳೇ ಈ ಶಿಕ್ಷೆಗೆ ನೇರ ಗುರಿ.

ಸಾಂಪ್ರದಾಯಿಕ ಧರ್ಮಾಚರಣೆ ಒಂದು ವಿಧಿವಿಧಾನಗಳ ಕಟ್ಟಳೆ ಮಾತ್ರವಾಗಿರದೆ, ಬದುಕಲು ಮಾರ್ಗದರ್ಶನ ನೀಡುವಂತಹುದೂ ಆಗಿರಬೇಕು, ಆದರೆ ಮೂಢ ನಂಬಿಕೆಗಳ ಬಲೆ ಹೆಣೆದ ಸಾಮಾಜಿಕ ವ್ಯವಸ್ಥೆಯು ಧರ್ಮದೊಳಗಿನ ತನ್ನ ಅಂಧ ಆಚರಣೆಗಳನ್ನು ತ್ಯಜಿಸದೆ ಹೋದರೆ ಅವೈಚಾರಿಕತೆಯ ಕೊಳೆ ನಿವಾರಣೆ ಹೇಗೆ ತಾನೇ ಸಾಧ್ಯ ? ಸಂಪ್ರದಾಯವಾದಿ ಮನೋಧರ್ಮ ಉಳ್ಳ ಗ್ರಾಮಾಂತರ ನಿವಾಸಿಗಳು ಈ ಸಂಪ್ರದಾಯದ ಸ್ಥಿತಿಗತಿಗಳಿಂದ ಹೊರಬರಬೇಕಾದ ಪರಿಸ್ಥಿತಿ ನಿರ್ಮಾಣವಾಗಬೇಕಾಗಿದೆ. ಮಹಿಳಾ ಸಶಕ್ತೀಕರಣ, ಸಬಲೀಕರಣ ಸಾಧಿಸಲು ಸರ್ಕಾರದ ಸ್ತ್ರೀಶಕ್ತಿ ಯೋಜನೆ, ಮಹಿಳಾ

ಅಭಿವೃದ್ಧಿ ಮುಂತಾದ ಯೋಜನೆಗಳ ಈ ಬಗೆಯ ಮೌಢ್ಯನಿವಾರಣೆಗೂ ಆದ್ಯತೆಯ ಕಾರ್ಯಕ್ರಮಗಳನ್ನು ಜತೆಗೂಡಿಸಿ ಕೊಳ್ಳದೇ ಹೋದರೆ ಮಹಿಳೆಯರು ಮಾನಸಿಕವಾಗಿ ಸಬಲರಾಗಲು ಸಾಧ್ಯವೇ ಇಲ್ಲ. ಮಹಿಳೆಯ ಜೀವನ ವಿರೋಧಿ ಸಂದರ್ಭ, ಕೃತ್ಯಗಳು ಸಂಭವಿಸುತ್ತಲೇ ಇರುತ್ತವೆ. ಸಾಂಪ್ರದಾಯಿಕ ಮನೋಧರ್ಮ, ಮೂಢನಂಬಿಕೆ, ಕಂದಾಚಾರಗಳು, ವಿಕೃತ ನಡೆವಳಿಕೆಗಳಿಂದ ಮಹಿಳೆಯರ ಖಾಸಗಿ ಬದುಕಿನ ಸ್ವಾತಂತ್ರ್ಯ ಹರಣವೂ ಆಗುತ್ತಿದೆ. ಸಾಮಾಜಿಕ ವ್ಯವಸ್ಥೆಯ ಕ್ರೌರ್ಯಗಳಿಗೆ ಪ್ರತಿಭಟನೆಯಾಗಿ ನೇರವಾಗಿ ಸಂಘರ್ಷಕ್ಕೆ ಇಳಿಯಬೇಕಾದ ಸಾಮರ್ಥ್ಯ ಪಡೆಯುತ್ತಿರುವುದು ಅನಿವಾರ್ಯ ಆಶಾದಾಯಕ ಬೆಳವಣಿಗೆ. ಹೆಣ್ಣಿನ ಅಂತರಾಳದ ನೋವು, ಆಕ್ರೋಶಗಳಿಗಿಂತ, ಅಸಹಾಯಕತೆಯ ಹಿನ್ನೆಲೆಯಲ್ಲಿ ಗಟ್ಟಿಗೊಂಡು ಪ್ರತಿಭಟನೆಯ ಸ್ವರೂಪ ತಳೆದದ್ದು ಬದಲಾವಣೆಯ ಸನ್ನದ್ಧತೆಯಾಗಿದೆ, ಅದರ ಒಂದು ನಿದರ್ಶನ ಈ ಸೋನಿಯಾ ಎಂಬ ಹೆಣ್ಣುಮಗಳ ಮನೋಭಾವದ ನಿರ್ಧಾರದಲ್ಲಿ ವ್ಯಕ್ತವಾಗಿದೆ.

ಸೋನಿಯಾ ಧೈರ್ಯವಂತೆ, ಪಂಚಾಯಿತಿಯ ಆದೇಶವನ್ನು ವಿರೋಧಿಸಿ ನಿಂತಳು, ಅವಳಿಗೆ ಮಾಧ್ಯಮಗಳ ಹಾಗೂ ಪೊಲೀಸರ ಬೆಂಬಲ ದೊರೆಯಿತು, ಇದಕ್ಕಾಗಿ ಅಲ್ಲಿನ ಮಾಧ್ಯಮದವರು ಹಾಗೂ ಪೊಲೀಸರಿಗೆ ಶ್ಲಾಘನೆಗಳು ಸಲ್ಲಲೇಬೇಕು. ಇವರ ಬಲದಿಂದ ಆತ್ಮವಿಶ್ವಾಸ, ಸ್ಥೈರ್ಯಗಳಿಂದ 'ಇದರ ವಿರುದ್ಧ ಹೋರಾಡುತ್ತೇನೆ' ಇದರಲ್ಲಿ ನನ್ನ ಕುಟುಂಬದವರ ಬೆಂಬಲದ ಜತೆಗೆ ಊರ ಕಾನೂನಿನ ಬೆಂಬಲವೂ ಇದೆ ಎಂದು ತೀರ್ಮಾನಿಸಿದಳು. ಅವಳ ಗಂಡ ಹಾಗೂ ಅವರ ಕುಟುಂಬವನ್ನೇ ಹಳ್ಳಿಯಿಂದ ಹೊರಹಾಕಲು ಪ್ರಯತ್ನಿಸಿದ್ದ ದುಷ್ಟಶಕ್ತಿಗಳ ವಿರುದ್ಧ ಕಾನೂನಾತ್ಮಕವಾಗಿ ಸಹಾ ಹೋರಾಡುವ ನಿರ್ಧಾರ ಮಾಡಿದಳು. ತನ್ನ ಬದುಕಿನ ನೆಮ್ಮದಿಯನ್ನೂ, ತನ್ನ ಜೀವನವನ್ನೇ ನಾಶಗೊಳಿಸ ಬಯಸಿದ್ದ ವ್ಯಕ್ತಿಯನ್ನು ಶಿಕ್ಷೆಗೆ ಒಳಪಡಿಸಬೇಕೆಂಬುದೇ ಅವಳ ಅಪೇಕ್ಷೆ ಆಯಿತು. ಇದಕ್ಕೆ ಕಾರಣ ಆಕೆ ಅನುಭವಿಸಿದ ಮಾನಸಿಕ ಹಿಂಸೆ, ತಲ್ಲಣಗಳು, ಅದನ್ನು ಆಕೆ ಹೇಗೆ ಹೇಳುತ್ತಾಳೆ :

'ಪಂಚಾಯಿತಿಯ ಆದೇಶ ಬಂದ ದಿನ ಅವರೆಲ್ಲರು ಏನು ಹಿಡಿದು ಬಂದರೆಂದೂ ನನಗೆ ತಿಳಿಯಲೇ ಇಲ್ಲ. ಅನಂತರ ಹೆಚ್ಚು ಜನರು ನಮ್ಮ ಮನೆಗೆ ಬಂದರು ಮತ್ತು ನನ್ನ ಗಂಡನಿಗೆ ನನ್ನನ್ನು ತಂಗಿ ಎಂದು ಒಪ್ಪಿಕೊಳ್ಳಬೇಕು ಎಂಬ ಆದೇಶವನ್ನು ಒಪ್ಪಿಕೊಳ್ಳಲು ಒತ್ತಾಯಿಸಿದರು. ಅವರ ಪ್ರಕಾರ ನಾನು ಮತ್ತು ನನ್ನ ಗಂಡ ಒಂದೇ ಗೋತ್ರದವರಾಗಿದ್ದೆವು. ಅವರು ನನ್ನ ಪತಿಯು ನನಗೆ ಸ್ವಲ್ಪ ಹಣವನ್ನು ಪರಿಹಾರವಾಗಿ ನೀಡಿ ಹೊಸ ಸಂಬಂಧವನ್ನು ಜಾರಿಗೆ ತರಬೇಕೆಂದು ತಿಳಿಸಿದರು. ಆದರೆ ನಾನು ಅದನ್ನು ಸ್ವೀಕರಿಸಲು ನಿರಾಕರಿಸಿದೆ. ನಮ್ಮ ಸಂಬಂಧದ ಪಾವಿತ್ರ್ಯತೆಯನ್ನು ಈ ರೀತಿ ಅವಹೇಳನ ಮಾಡುವುದು ನನಗೆ ಹಿಡಿಸಲಿಲ್ಲ'

ಇಷ್ಟು ಹೇಳುತ್ತಾ ಅವಳ ಕಂಗಳಲ್ಲಿ ನೀರು ಸುರಿಯಲಾರಂಭಿಸಿತು. ಮುಂದೇನಾಯಿತು ಎಂಬುದನ್ನು ವಿವರಿಸಿದಳು. ಅವರೆಲ್ಲಾ ಅವಳ ಈ ವಿಚಾರಗಳಿಗಾಗಿ ನಿಂದಿಸಿದರು. ' ಆ ಹಳ್ಳಿಯ ಸರಪಂಚ ನನ್ನ ದುಪಟ್ಟಾ ಹಿಡಿದು ಎಳೆದನು. ನನ್ನ ಗಂಡನ ಮನೆ ಬಿಟ್ಟು ಕೂಡಲೇ ಹೋಗಬೇಕೆಂದು ಚಪ್ಪಲಿ ಹಾಕಲೂ ಬಿಡದೆ ಆಚೆಗೆ ನೂಕಿದರು. ನನ್ನ ಅತ್ತಿಗೆಯೊಡನೆ ಅಲ್ಲಿಂದ ಹೆದರಿಕೆಯಿಂದಲೇ ನನ್ನ ಮಗುವಿನ ಭಯದಿಂದ ಕೂಡಲೇ ಹೊರಟುಬಂದೆ' ಎಂದಳು. ಇದರ ನಂತರ ಮಾನಸಿಕ ಆಘಾತದ ಪರಿಣಾಮ ಆಕೆ ಆಸ್ಪತ್ರೆ ಸೇರಬೇಕಾಯಿತು.

ಸೋನಿಯಾ ಮತ್ತೆ ತನ್ನ ಹಳ್ಳಿಗೆ ಹಿಂದಿರುಗಲು ಆಗಲೇ ಇಲ್ಲ. ಆಕೆಯ ಗಂಡನು ನರರೋಗ ಪೀಡಿತನಾದ. ಅವನು ಸಿಗರೇಟ್‌ಗೆ ಮೊರೆಹೋದ. ಸಿಗರೇಟ್ ಹಚ್ಚುವಾಗ ಕೈಗಳು ನಡುಗುತ್ತಿದ್ದವು. 'ನನ್ನ ಮನಸ್ಸು ಕೆಲಸ ಮಾಡುತ್ತಿಲ್ಲ. ನಾನು ಏನು ಹೇಳಲೂ ಆಗದು' ಎಂದು ಏನು ಹೇಳಲೂ ನಿರಾಕರಿಸುತ್ತಿದ್ದನು.

ಇದು ಎರಡು ಮೂರು ವಾರಗಳ ಹಿಂದೆ ಆದ ಘಟನೆ, ದಂಪತಿಗಳಿಬ್ಬರ ಜೀವನವನ್ನು ಅವರ ಕುಟುಂಬವನ್ನು ಆಘಾತಕ್ಕೀಡು ಮಾಡಿದೆ. ಅಲ್ಲಿನ ಜನರವಾದ ಈ ಸಗೋತ್ರ ವಿವಾಹ ಅವರ ಸಮಾಜದ ಪ್ರಕಾರ ತಪ್ಪು. ಅವರಿಬ್ಬರೂ ಕೋರ್ಟಿನಲ್ಲಿ ವಿವಾಹವಾದವರಾದ್ದರಿಂದ ಇಂದಿನವರೆಗೆ ಅಲ್ಲಿ ಯಾರಿಗೂ ಈ ಬಗ್ಗೆ ತಿಳಿದಿರಲಿಲ್ಲವಂತೆ ! ಸೋನಿಯಾ ಆ ಪ್ರದೇಶದ 'ಹೂಡಾ' ಎಂಬ ಗುಂಪಿಗೆ ಸೇರದೆ 'ರಾಥಿ' ಎಂಬ ಉಪಜಾತಿಯವಳಾಗಿದ್ದಾಳೆ ಎಂಬ ಆರೋಪ ಪುರುಷಶಾಹಿಗಳದು. ಆ ಊರಿನ ಕಿರಿಯರಿಗೂ, ಹಿರಿಯರಿಗೂ ಹೆಣ್ಣು ಜೀವನ ನಿಗ್ರಹಿಸುವಂಥದು ಮತ್ತು ಪುರುಷರ ಮಾರ್ಗದರ್ಶನದಿಂದ ನಡೆಯುವಂಥದು ಎಂಬ ವಿಚಾರ ಸ್ಥಾಯಿಯಾಗಿದೆ. ಸೋನಿಯಾಳಿಗಾದ ಅನ್ಯಾಯ, ನಾಚಿಕೆಗೇಡಿನದು, ಜನರ ಖಾಸಗಿ ಬದುಕಿನಲ್ಲಿ ಇತರರ ಪ್ರವೇಶ ತಪ್ಪು ಎಂಬ ವಿಚಾರಗಳೇ ಅವರಿಗಿಲ್ಲ.

ಹಳ್ಳಿಯ ಜನರಿಗೆ 'ಗೋತ್ರ' ವಿಷಯ ಪ್ರಮುಖವಾಗಿದೆ. ಸಾಮಾಜಿಕ ಜೀವನವನ್ನು ತಾವು ಕಾಯುತ್ತೇವೆ ಎಂಬ ಭ್ರಮೆಯಿಂದ ಸೋನಿಯಾಳ ಮನೆಗೆ ಹೋಗಿ ಅವಳನ್ನು ಅಪಮಾನಿಸಿ ಬಂದಿದ್ದಾರೆ. ಈಗ ಕೋರ್ಟ್ ತೀರ್ಮಾನದಂತೆ ನಡೆಯಲೂ ಅವರಿಗೆ ಸಮ್ಮತಿಯಿರುವುದು ಆಶ್ಚರ್ಯಕರ. ನರೇಶಕುಮಾರ್ ಎಂಬ ಸರಪಂಚ ತಾನು ಅವಳ ದುಪಟ್ಟಾ

ಸೆಳೆಯಲಿಲ್ಲ ಎಂದೂ, ಅವಳ ಮನೆಗೆ ಹೋಗಿದ್ದೂ ನಿಜ ಮನೆಯಿಂದ ಹೊರಹೋಗಲು ತಿಳಿಸಿದ್ದೂ ನಿಜ ಎಂದು ತಿಳಿಸಿದ್ದಾನೆ. ಇದಕ್ಕೆ ಕಾರಣ ಸ್ಥಳೀಯ ಜನರ ಒತ್ತಡ. ಅಲ್ಲದೆ ಸೋನಿಯ ಮತ್ತು ರಾಮ್‌ಪಾಲರ ವರ್ತನೆ ತಪ್ಪು, ಇದರಿಂದ ಹಳ್ಳಿಯ ಜೀವನ ಅಸ್ತವ್ಯಸ್ತಗೊಂಡಿದೆ ಎಂದಿದ್ದಾರೆ ಹಳ್ಳಿಯವರು.

ಅವರಾರಿಗೂ ಈ 'ಗೋತ್ರ' ವ್ಯವಹಾರ ಹಿಂದುಳಿದ ಜನರ ವರ್ತನೆ ಎಂದು ತಿಳಿದೇ ಇಲ್ಲ. ಸೋನಿಯಾ ಮತ್ತು ಅವಳ ಮಗು ರಕ್ಷಿಸಲ್ಪಟ್ಟಿರುವುದು ಶುಭ ಸಮಾಚಾರ ಎನ್ನ ಬೇಕಾಗಿದೆ.

ಒಟ್ಟಾರೆ ಹೆಣ್ಣು ಧರ್ಮದ ಕಟ್ಟುಪಾಡುಗಳೊಡನೆ ಸದಾ ಸಮಾಜದ ಒಳಿತು ಕೆಡುಕಿಗಾಗಿ ಜಿಜ್ಞಾಸೆಯಲ್ಲಿ ತೊಳಲಾಡುವ ಪರಿಸ್ಥಿತಿ ತಂದೊಡ್ಡಿರುವುದು, ಧರ್ಮ ಹಾಕಿದ ಗೆರೆ ದಾಟಿದರೆ ಆಕೆಯನ್ನು ಆ ಧರ್ಮದಿಂದಲೇ ಬಹಿಷ್ಕಾರದಲ್ಲಿಡುವುದು, ಅವಳ ನೆಮ್ಮದಿ ನಾಶಮಾಡುತ್ತಾ, ತಾನು ಮಾಡದ ತಪ್ಪಿಗೂ ಶಿಕ್ಷೆ ಅನುಭವಿಸ ಬೇಕಾದಂಥ ಪರಿಸ್ಥಿತಿ ನಿರ್ಮಿಸಿರುವುದು ಈ ನಾಗರಿಕ ಸಮಾಜದಲ್ಲೂ, ಆಧುನಿಕತೆಯ ನಡುವೆಯೂ ದಬ್ಬಾಳಿಕೆ ನಡೆಸುತ್ತಿರುವುದು ಅಮಾನವೀಯ ಹಾಗೂ ಮಾನವ ಹಕ್ಕುಗಳ ಉಲ್ಲಂಘನೆಯೂ ಆಗುತ್ತಿರುವುದನ್ನು ತಡೆಯಲಾಗದ ಪರಿಸ್ಥಿತಿಗಳ ಬಗ್ಗೆ ಸಂಘಟನೆಗಳು ಹೋರಾಡಬೇಕಾಗಿದೆ.

ದೂರದರ್ಶನ ಮಾಧ್ಯಮಗಳು, ಸಾಮಾಜಿಕ ಪರಿವರ್ತನೆಯ ವೇಗವರ್ಧಕಗಳಾಗಿ ವ್ಯವಹರಿಸಬೇಕಾದ ಜವಾಬ್ದಾರಿ ಹೊಂದಿವೆ. ಮೂರ್ಖರ ಪೆಟ್ಟಿಗೆ ಎಂಬ ಬಿರುದು ಹೋಗಿ ಹಿಂದುಳಿದ, ಅಶಿಕ್ಷಿತರ, ಅಥವಾ ಅರ್ಧ ಶಿಕ್ಷಿತರಲ್ಲಿ ವಿಚಾರಗಳ ಬೀಜವನ್ನು ಬಿತ್ತುತ್ತಾ ಕ್ರಾಂತಿ ಬೆಳಕಿನಿಂದ ಉಪಯುಕ್ತವಾಗಬೇಕು. ಕಡೇ ಪಕ್ಷ ಪತ್ರಿಕೆಗಳು ಹಾಗೂ ಇತರ ಮಾಧ್ಯಮಗಳು ಸೋನಿಯಾಳ ಪರ ಬೆಂಬಲ ನೀಡಲು ಮುಂದೆ ಬಂದದ್ದು ಅವುಗಳ ಸಾಮಾಜಿಕ ಜವಾಬ್ದಾರಿಯ ಕುರುಹಾಗಿದೆ. ಹೀಗೆ ಸ್ತ್ರೀಯರ ಶೋಷಣೆ, ಕಟ್ಟುಪಾಡು, ಕಂದಾಚಾರಗಳ ನಿವಾರಣೆಗೂ, ಬದುಕಿನ ಭದ್ರತೆಗೂ ಅಗತ್ಯ ಜಾಗೃತಿ ಮೂಡಿಸಬೇಕಾಗಿರುವುದು ವಿಚಾರವಂತರ, ಮಾಧ್ಯಮಗಳ ಇಂದಿನ ತುರ್ತು ವಿಚಾರವಾಗಿದೆ.

# ಕಡೆಂಗೋಡ್ಲು ಶಂಕರ ಭಟ್ಟರ ಕಾದಂಬರಿ 'ಲೋಕದ ಕಣ್ಣು' ಒಂದು ವಿಮರ್ಶೆ

ಡಾ.ಸಿ.ವೈ.ಕವಿತಾ

ಸಣ್ಣಕಥೆ, ನಾಟಕ, ಕವಿತೆ, ಕಾದಂಬರಿ, ವಿಮರ್ಶೆ ಮತ್ತು ಪತ್ರಿಕೋದ್ಯಮದಲ್ಲಿ ಕೃಷಿ ಮಾಡಿದ ಕಡೆಂಗೋಡ್ಲು ಶಂಕರಭಟ್ಟರು ನವೋದಯ ಕಾಲದ ಒಬ್ಬ ಅಪೂರ್ವ ಸಾಹಿತಿ. ಈ ವರ್ಷ ಅವರ ಜನ್ಮಶತಮಾನೋತ್ಸವವನ್ನು ಹಲವಾರು ಸಂಘ ಸಂಸ್ಥೆಗಳು ಆಚರಿಸಿವೆ. ಈ ಹಿನ್ನೆಲೆಯಲ್ಲಿ ಅವರ ಕಾದಂಬರಿಗಳಲ್ಲಿ ಒಂದಾದ 'ಲೋಕದಕಣ್ಣು' ಎಂಬ ಕೃತಿಯನ್ನು ವಿವೇಚಿಸುವ ಒಂದು ಪ್ರಯತ್ನ ಇಲ್ಲಿದೆ. 1948 ರಲ್ಲಿ ಪ್ರಕಟಗೊಂಡ ಈ ಕೃತಿ ಒಬ್ಬ ಪತ್ರಿಕೋದ್ಯಮಿಯ ಸಂಸಾರದ ಸುತ್ತ ಹೆಣೆದ ಕತೆ. ಇಂದಿಗೂ ಈ ಕೃತಿ ಓದಿಸಿಕೊಂಡು ಹೋಗುವುದಕ್ಕೆ ಮುಖ್ಯ ಕಾರಣ, ಅವರು ಇದರಲ್ಲಿ ಕೈಗೆತ್ತಿಕೊಂಡಂತಹ ಸಮಸ್ಯೆ ಮತ್ತು ಅದರ ಸಾರ್ವಕಾಲಿಕತೆ. ಸ್ವತ. ಪತ್ರಿಕೋದ್ಯಮಿಯಾದ ಲೇಖಕರು ಆದರ್ಶ ಪತ್ರಿಕೋದ್ಯಮಿಯೊಬ್ಬರ ಜೀವನದ ಸುತ್ತ ಹೆಣೆದ ಬದುಕನ್ನು ಕಾಣಿಸುತ್ತಾರೆ. ಪರಸ್ಪರ ಅಭಿಪ್ರಾಯ ಸ್ವಾತಂತ್ರ್ಯಕ್ಕೆ ಬೆಲೆಯಿತ್ತು ಅರ್ಥಮಾಡಿಕೊಂಡು ಒಬ್ಬರಿಗೊಬ್ಬರು ಪೂರಕವಾಗಿ ಬದುಕಬೇಕೆಂಬ ಆದರ್ಶವನ್ನಿಟ್ಟುಕೊಂಡ ಪ್ರಭಾಕರ ಮತ್ತು ಕಾಮಾಕ್ಷಿ, ಈ ಕಾದಂಬರಿಯ ಮುಖ್ಯ ಪಾತ್ರಗಳು. ಇವರ ಜೊತೆ ಸಂಗ್ರಾಮ ಪತ್ರಿಕೆಯ ಬೆನ್ನೆಲುವಾಗಿ ದುಡಿಯುವ ಶಾಮಣ್ಣನಿದ್ದರೆ, ಇನ್ನೊಂದೆಡೆ ಡಾ.ನಾಗೇಶರಾಯ ಪ್ರತಿನಾಯಕನ ಹಾಗೆ ಕಾಣಿಸಿಕೊಳ್ಳುತ್ತಾನೆ. ಆತ ಸೋದರಸಂಬಂಧಿಯಾದ ಕಾಮಾಕ್ಷಿಯನ್ನು ಮದುವೆಯಾಗ ಬೇಕೆಂದು ಆಸೆಪಟ್ಟವ. ಆದರೆ ಅವನನ್ನು ಆಕೆ ಮದುವೆಯಾಗಲು ನಿರಾಕರಿಸಿದಾಗ ಅದು ಅವನ ಪೌರುಷಕ್ಕೆ ಸವಾಲಾಗುತ್ತದೆ. ಅವಳ ನಿರಾಕರಣೆಯೇ ಅವಳ ಸುಖೀ ಆದರ್ಶ ದಾಂಪತ್ಯಕ್ಕೆ ಎರವಾಗಿ, ಬದುಕು ದುರಂತದ ದಿಕ್ಕಿಗೆ ಸಾಗುತ್ತದೆ.

ಕಾಮಾಕ್ಷಿಯಿಂದ ನಿರಾಕರಿಸಲ್ಪಟ್ಟ ನಾಗೇಶರಾಯ ಧನಿಕದ್ವೇಷಿಯಾಗಿ, ವಿವಾಹವನ್ನು ನಿರಾಕರಿಸಿ, ಒಂಟಿತನವನ್ನು ನೀಗಲು ಮಾರ್ಕ್ಸ್‌ನ ಆರಾಧಕನಾಗುತ್ತಾನೆ ಎಂದು ವಿಡಂಬಿಸಿದ್ದಾರೆ. ತನ್ನ-ವೃತ್ತಿಯಿಂದ ಧಾರಾಳವಾಗಿ ಹಣಸಂಪಾದಿಸಿ ಬಿಡುವಿನ ಸಮಯದಲ್ಲಿ ಸಮತಾವಾದವನ್ನು ಹೊಗಳುತ್ತಾನೆ. ಹೀಗೆ ಆದರ್ಶವಿಲ್ಲದೆ ಇಂತಹ ವಾದಗಳನ್ನು ತಮ್ಮ ಜೀವನದಲ್ಲಿ ತೋರಿಕೆಗಾಗಿ ಬಳಸಿಕೊಳ್ಳುವವರನ್ನು ಲೇಖಕರು ನವಿರಾಗಿ ವಿಡಂಬಿಸುವ ಕಾರಣದಿಂದಲೇ ಶಂಕರಭಟ್ಟರು ಈ ಕಾಲಕ್ಕೂ ಪ್ರಸ್ತುತವಾಗುತ್ತಾರೆ.

ನಾಗೇಶರಾಯನು ಕಾಮಾಕ್ಷಿಯ ಬದುಕನ್ನು ದುರಂತ ಗೊಳಿಸಲು, ಶಾಮಣ್ಣನ ಅನಾರೋಗ್ಯದ ಸಂದರ್ಭವನ್ನು ಮತ್ತು ಮಿಸ್ ಭಾಮೆ ಎಂಬ ಹೆಣ್ಣನ್ನು ಬಳಸಿಕೊಂಡಿರುವಲ್ಲಿ ಆತನ ಸ್ಯಾಡಿಸಂ ವ್ಯಕ್ತಿತ್ವ ಅನಾವರಣಗೊಂಡಿದೆ. 'ಲೇಖಕರು ಭಾಮೆಯನ್ನು ನಿಮಗೆ ಮೊದಲು ಪರಿಚಯಿಸುವಾಗ ಅವಳು ಏತಕ್ಕೂ ಹೇಸದ

ಒಬ್ಬ 'ಗಂಡು ಬೀರಿ' ಹೆಣ್ಣು ಎನ್ನುವಂಥ ಕಲ್ಪನೆ ಬಂದರೂ ಕಾದಂಬರಿಯ ಒಟ್ಟಂದದಲ್ಲಿ ಆಕೆಯ ಪಾತ್ರ ಬಹಳ ಮಹತ್ವದ್ದು. ಮಂಗಳೂರಿನ ರಾಜಕೀಯದಿಂದ ನಾಗೇಶ, ಪ್ರಭಾಕರ ಕಾಮಾಕ್ಷಿಯರ ವೈಯಕ್ತಿಕ ಜೀವನದ ತನಕ ತನ್ನ ವ್ಯಕ್ತಿತ್ವದ ವರ್ಚಸ್ಸನ್ನು ಬೀರಿ, ಒಂದು ಪುಟ್ಟ ಬಿರುಗಾಳಿ ಬೀಸಿ ಒಂದು ಸಣ್ಣ ಇತಿಹಾಸ ನಿರ್ಮಿಸಿ, ಅಷ್ಟೇ ಸಹಜವಾಗಿ ಆಕಸ್ಮಿಕವಾಗಿ ಹೊರಟುಬಿಡುತ್ತಾಳೆ. ಒಂದು ದೃಷ್ಟಿಯಿಂದ ಪ್ರಭಾಕರನ ಗುರಿ ತಪ್ಪಿದ ಪಯಣಕ್ಕೆ ತಡೆಹಾಕಿ, ಕಾಮಾಕ್ಷಿಯ ಬಗೆಗೆ ಅವನ ಮನಸ್ಸಿನಲ್ಲಿ ಅಕಾರಣವಾಗಿ ಮೂಡಿದ್ದ ಕಹಿ ಭಾವನೆಯನ್ನು ತೊಳೆದು ಮಾರ್ಗದರ್ಶನ ಮಾಡಿದವಳು ಅವಳು. ಈ ಕಾದಂಬರಿಯ ಹೃದಯ ಸ್ಪರ್ಶಿಯಾದ ಭಾಗಗಳಲ್ಲಿ ಇದೂ ಒಂದು. ಒಟ್ಟಿನಲ್ಲಿ ಈ ಮಾಡರ್ನ್ ಹೆಂಗಸಿನ ಬಗ್ಗೆ ಕಾದಂಬರಿಯ ಕೊನೆಯಲ್ಲಿ ಗೌರವ ಉಳಿಯುತ್ತದೆ. ನೇರ ನುಡಿ, ನೇರ ನಡೆ ಮುಚ್ಚು ಮರೆಯಿಲ್ಲ. ಮಹಿಳಾ ಪಾತ್ರಗಳಲ್ಲಿ ಮಿಸ್, ಭಾಮೆ, ಶಂಕರಭಟ್ಟರ ಒಂದು ಅಪೂರ್ವ ಸೃಷ್ಟಿ, ಎನ್ನುವ ಬನ್ನಂಜೆ ಗೋವಿಂದಾಚಾರ್ ಅವರ ಮಾತಿಗೆ ಎರಡನೆ ಅಭಿಪ್ರಾಯವೇ ಇಲ್ಲ. ಭಾಮೆ ಆ ಕಾಲದಲ್ಲೇ ರಿಜಿಸ್ಟರ್ಡ್ ಕಛೇರಿಯಲ್ಲಿ ಮದುವೆಯಾಗಿ ನಾಲ್ಕೇ ವರ್ಷಗಳಲ್ಲಿ ವಿಚ್ಛೇದನಗೊಂಡು ಒಂಟಿಯಾಗಿ, ದಿಟ್ಟೆಯಾಗಿ ತಿರುಗಾಡುವ, ಮಾಡ್ರರ್ನ್ ಹೆಣ್ಣಾಗಿ ಚಿತ್ರಿತವಾದರೂ ಲೇಖಕರು ಎಲ್ಲೂ ಅವಳ ವ್ಯಕ್ತಿತ್ವವನ್ನು ಅಗೌರವದಿಂದ ಕಂಡಿಲ್ಲ. 20ನೇ ಶತಮಾನದ 40ರ ದಶಕದಲ್ಲೇ ಇಂತಹ ಒಂದು ಪಾತ್ರವನ್ನು ಸೃಷ್ಟಿಸಿರುವುದು ಬೆರಗನ್ನು ಹುಟ್ಟಿಸುವಂತಿದೆ.

ಭಾಮೆ ರಾಜಕೀಯ ಪ್ರವೇಶಮಾಡಲು ಚುನಾವಣಾ ಪ್ರಚಾರಕ್ಕಾಗಿ ಸಂಗ್ರಾಮ ಪತ್ರಿಕೆಯನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ. ಈ ಸಂದರ್ಭದಲ್ಲಿ 'ಲೋಕಪ್ರಿಯ ಪತ್ರಿಕೆ' ಎಂಬ ಮಾತು ಬಂದಾಗ, ಭಾಮೆ ಬಹಳ ತೀಕ್ಷ್ಣವಾಗಿ ಲೋಕಪ್ರಿಯತೆಯನ್ನು ಟೀಕಿಸುತ್ತಾಳೆ. ಇಂದಿನ ಜನಪ್ರಿಯ ಪತ್ರಿಕೆಗಳ ಸ್ಥಿತಿಗತಿಗಳಿಗೆ ಆ ಟೀಕೆ ಕನ್ನಡಿ ಹಿಡಿದಂತಿದೆ. ಸಾಮಾನ್ಯವಾಗಿ ಒಂದು ಪತ್ರಿಕೆಯ ಜನಪ್ರಿಯತೆಗೆ, 'ಚಲನಚಿತ್ರ ನಟಿಯರ ಫೋಟೋ, ವಾರಭವಿಷ್ಯ, ಪಾಪಕೂಪಗಳ ಕರ್ಮ ಎಂದು ಹೇಳಿ ಸಂಗ್ರಾಮ ಪತ್ರಿಕೆ'ಯ ಜನಪ್ರಿಯತೆಗೆ ಸಮಾಜಕ್ಕೆ ಹಾದಿ ತೋರುವ ಒಂದು ಸಂಪ್ರದಾಯವಿರುವುದೇ ಕಾರಣವೆಂದು ಸಮರ್ಥಿಸಿದ್ದಾರೆ. ಹಣಮಾಡುವ ಪತ್ರಿಕೆಗಳ ವಿವಿಧ ತಂತ್ರಗಳನ್ನು ಅಂದೇ ಗುರುತಿಸಿರುವುದರಿಂದ ಈ ಕೃತಿ ಇಂದಿಗೂ ಪ್ರಸ್ತುತವಾಗಿದೆ. ಈ ಕಾದಂಬರಿಯಲ್ಲಿ ಸ್ವತಂತ್ರವಾಗಿ ಪ್ರಾಮಾಣಿಕವಾಗಿ ನಡೆಯುತ್ತಿದ್ದ ಪತ್ರಿಕೆ ಕೊನೆಗೆ ಬಂಡವಾಳಶಾಹಿಗೆ ಬಲಿಯಾಗುವುದನ್ನು ವಿಷಾದದಿಂದ ಕಾಣಿಸಿದ್ದಾರೆ.

ಕಾಮಾಕ್ಷಿ ದಂಪತಿಗಳು ಕಾಮಣ್ಣನಿಗೆ ಆಶ್ರಯ ನೀಡಿದುದೇ ಲೋಕದ ಕಣ್ಣಿನಲ್ಲಿ ದೊಡ್ಡ ಅಪರಾಧವಾಗಿ ಪರಿಣಮಿಸುತ್ತದೆ. ಸಂಪ್ರದಾಯಸ್ಥರು, ಕಾಮಾಕ್ಷಿ ಮತ್ತು ಶಾಮಣ್ಣರನ್ನು ಅನುಮಾನದಿಂದ ನೋಡುವಂತಾಗುತ್ತದೆ. ಸಂಪ್ರದಾಯದ ಬೇಲಿಯೊಳಗೆ ಬೆಳೆದ ಚಿಕ್ಕಮ್ಮ ಮಲತಾಯಿ, ತಂದೆಯರ ದೋಷಣೆಗೆ ಒಳಗಾಗಿ, ಗಂಡನಿಂದ ಮಾನಸಿಕವಾಗಿ ದೂರವಾಗಿ ಕೊನೆಗೆ ಕಾಮಾಕ್ಷಿ ದುರಂತ ಜೀವನವನ್ನಪ್ಪುತ್ತಾಳೆ. ಭಾವುಕ ವ್ಯಕ್ತಿಗಳಿಗೆ ಜೀವನವನ್ನೆದುರಿಸಲು ಆಗುವ ಕಷ್ಟ, ಆತ್ಮೀಯರೊಡನೆ ಭಿನ್ನಾಭಿಪ್ರಾಯ ಮೊಳೆತು, ಬದುಕನ್ನು ವ್ಯಾಪಿಸಿದಾಗ, ಲೋಕ ಎಂತವರನ್ನು ಸಂಶಯದೃಷ್ಟಿಯಿಂದ ನೋಡುವುದೆಂಬ ಚಿತ್ರಣ ಇಲ್ಲಿದೆ. ಇಂತಹ ಸನ್ನಿವೇಶಗಳು ಅಂದಿನ ಕೌಟುಂಬಿಕ, ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿಸುತ್ತದೆ. ಆದರೂ ಕಾಮಾಕ್ಷಿಯ ವ್ಯಕ್ತಿತ್ವವನ್ನು ಭಟ್ಟರು ಸೊಗಸಾಗಿ ಮೂಡಿಸಿದ್ದಾರೆ. ಆ ಕಾಲದಲ್ಲಿ ಬಿ.ಎ. ಓದಿದ ಆಧುನಿಕ ಸುಸಂಸ್ಕೃತ ಹೆಣ್ಣು, ಸ್ವಾಭಿಮಾನಿ, ಧೈರ್ಯ ಸ್ಥೈರ್ಯಗಳಿಂದ ಕೂಡಿದ ವೃತ್ತಿಪರ ಹೆಣ್ಣಿನ ಮಾದರಿಯನ್ನು ನೀಡಿದ್ದಾರೆ. ಹೀಗೆ ಪತ್ರಿಕೋದ್ಯಮ ರಾಜಕೀಯ ಕ್ಷೇತ್ರಗಳ ಹಿನ್ನೆಲೆಯಲ್ಲಿ ಮಾನವೀಯ ಸಂಬಂಧಗಳ ಸಮಸ್ಯೆಯನ್ನು ಬಹಳ ಸೊಗಸಾಗಿ ಈ ಕಾದಂಬರಿ ಚಿತ್ರಿಸಿದೆ.

**ಡಾ.ಸಿ.ವೈ.ಕವಿತಾ**
ಕನ್ನಡ ಉಪನ್ಯಾಸಕಿ
ಎಂ.ಎಂ.ಕೆ. ಮತ್ತು ಎಸ್.ಡಿ.ಎಂ
ಮಹಿಳಾ ಮಹಾ ವಿದ್ಯಾಲಯ, ಕೆ.ಆರ್. ಪುರಂ, ಮೈಸೂರು

**ಗೀತಾ ನಾಗಭೂಷಣ್ ರವರ 'ಬದುಕು' ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕ್ಯಾಡಮಿ ಪ್ರಶಸ್ತಿ ಲಭಿಸಿದೆ 'ಮಾನಸ' ಅವರನ್ನು ಅಭಿನಂದಿಸುತ್ತದೆ.**

# ಅಕ್ಕ - ತಂಗಿಯರ ಹಾಡು

ಹೀಗೆ ಸುಂದರ ಸಂಜೆ
ರಸ್ತೆಯ ತಿರುವೊಂದರಲಿ ಹೊಳೆದವನು
ಚೆನ್ನ ಮಲ್ಲಿಕಾರ್ಜುನನೆಂದು
ಒಲಿದು ಬಂದಳೂ ಅಕ್ಕ
'ನೀನೇ ನನಗೆ ಗಂಡನೆಂದು'

ಕ್ಯಾಂಪಸ್ಸಿನ ಹೂವುಗಳೆಲ್ಲಾ ಅರಳಿದವು
'ಚಿಲಿಪಿಲಿಯೆಂದೋದುವ ಗಿಳಿಗಳೆಲ್ಲಾ
ನಾಚಿ ಕೆಂಪಾದವು
ವನವನವೆಲ್ಲಾ ಅವನಾಗಿ....
ವನದೊಳಗಿನ ಪುಷ್ಪವೆಲ್ಲಾ ಅವಳಾಗಿ....

ಕನಸಿನಲಿ ಕಂಡು ಬೆಂಬತ್ತಿದವಳು
ಅವನ ಕೈ ಹಿಡಿದು ಕಣ್ ತೆರೆದಳು.
'ಹಾಸಿದ ಹಾಸಿಗೆಯ ಹಂಗಿಲ್ಲದೇ' ಇಬ್ಬರೂ
ಕಳೆದರು
'ಹಗಲಿನ ಕೂಟಕ್ಕೆ ಹೋರಿ ಬೆಂಡಾ'ದವರು
'ಮಚ್ಚು ಅಚ್ಚುಗದಂತೆ' ಬೆಚ್ಚ ಬೆಸುಗೆ ತೋರದಂತೆ
ಕೂಡಿದರು............
ಜಗಕೆಲ್ಲಾ ಬೆರಗಾಗಿ .................
ಅವಳು ಅಟ್ಟಳು ಇವನು ಬಡಿಸಿದ
ಅವನು ನೀಡಿದ ಇವಳು ಉಂಡಳು

'ತಲೆಯಿಲ್ಲದವ'ಳಿಗೆ
'ಕಾಲಿಲ್ಲದವ' ಬಂದು ಕೂಡಿದ
ಕೂಟದ ಪರಿ ಪೂರ್ಣ ಮಾಡಿದ
ವಿಸ್ಮಯಕೆ ಎಣೆಯಿಲ್ಲವಾಗಿ....

ಒಂದು ದಿನ ಬೆಳ್ಳಂ ಬೆಳಗಿನ.... ಆ
ಚೆನ್ನ ಮಲ್ಲಿಕಾರ್ಜುನನೊಳಗೆ
ಕೌಶಿಕ ಹೇಗೋ ಬಂದು ತೂರಿಕೊಂಡು ಬಿಟ್ಟ
ದಿನ ದಿನಕ್ಕೆ ಬೆಳೆದು ವಿಕಾರ ಬ್ರಹ್ಮನಾದ
ಜನರೆಲ್ಲಾ ನೋಡುತಿರಲಾಗಿ....

ಅಚ್ಚಿನಿಂದ ಮಚ್ಚುಗ
ಮೆಲ್ಲಗೆ ಹೊರಬಿದ್ದು
ಕಾಲು ತಲೆ ಬೇರ್ಪಟ್ಟವು
ಹೋರಿದ ಹಗಲಿರುಳುಗಳು
ನೆತ್ತರ ಹೊಂಡಗಳಾದವು
ವನ ವನದ ಮೊಗ್ಗುಗಳೆಲ್ಲಾ
ಕೆಂಡಗಳಾದವು.
ಚೆನ್ನ ಕರಗಿಬಿಟ್ಟ,
ಮಲ್ಲಿಗೆ ಬಾಡಿ ಹೋಯಿತು.....

- ಡಾ । ಗಿರಿಜಾ ಶಾಸ್ತ್ರಿ

ಈ ಸಂಚಿಕೆಯ ಬಗ್ಗೆ ಒಂದು ಮಾತು. 'ಮಾನಸ'ದ ಓದುಗರನ್ನೊಳಗೊಂಡು ಪತ್ರಿಕೆಯ ಸಂಚಿಕೆಗಳನ್ನು ಹೊರತರುವ ಮೂಲಕ ಓದುಗರಲ್ಲಿ ಕುತೂಹಲ, ಹೊಸ ಉಲ್ಲಾಸ ಮೂಡಿಸಬಹುದು ಹಾಗೂ ಪತ್ರಿಕೆಯಲ್ಲಿ ಹೊಸತನವನ್ನು ತರಬಹುದೆಂಬ ಗುಂಪಿನ ಆಶಯವನ್ನು ಕಾರ್ಯರೂಪಕ್ಕಿಳಿಸುವ ಪ್ರಯತ್ನದ ಫಲವೇ ಈ ಸಂಚಿಕೆಯಾಗಿದೆ. ಪತ್ರಿಕೆಯ ಓದುಗರಾಗಿ ಮೈಸೂರಿನ ಗೆಳೆಯ/ಗೆಳತಿಯರಾದ ಬಿ.ಸಿ.ಮಂಜುಳಾ, ಅಪ್ಪಾಜಿಗೌಡ, ಡಾ.ಎಸ್.ಡಿ.ಶಶಿಕಲಾ, ಸವಿತಾ ನಾಗಭೂಷಣ್, ಡಾ.ದಯಾನಂದ, ಎಂ.ರಂಗಸ್ವಾಮಿ, ಡಾ.ಸಿ.ವೆಕವಿತಾ, ಡಾ.ಕೆ.ಎಸ್.ರತ್ನಮ್ಮ ಮುಂತಾದವರು ಲೇಖನಗಳನ್ನು ಬರೆದಿದ್ದಾರೆ, ಬರೆಸಿದ್ದಾರೆ, ಸಂಪಾದಿಸಿ ಕೊಟ್ಟಿದ್ದಾರೆ ; ಹೊಸ ಚಂದಾದಾರರನ್ನು ತೋರಿಸಿ ಕೊಟ್ಟಿದ್ದಾರೆ. ಇವರೆಲ್ಲರ ಅಮೂಲ್ಯ ನೆರವಿನಿಂದಾಗಿ ಈ ಸಂಚಿಕೆ ನಿಮ ಕೈಸೇರುತ್ತಿದೆ. ಇವರನ್ನೆಲ್ಲ ಇಲ್ಲಿ ನೆನೆಯುತ್ತಾ ನಿಮ್ಮೆಲ್ಲರ ಸಲಹೆ-ಸೂಚನೆಗಳಿಗಾಗಿ ಕಾಯುತ್ತೇವೆ.
ಸಂಪಾದನಾ ಮಂಡಳಿ

## ಒಂದಿಷ್ಟು ಅನಿಸಿಕೆ (ಮಾನಸ ಡಿ. 2004)

ತಾವು 'ಬದುಕು' ಬಗ್ಗೆ ಚೆನ್ನಾಗಿ ವಿಶ್ಲೇಷಿಸಿದ್ದೀರಿ, ಶ್ರೀಮತಿ ಗೀತಾ ನಾಗಭೂಷಣರವರು ಅಪರೂಪದ ಬರಹಗಾರ್ತಿ, ನಾವು ಬಹಳಷ್ಟು ಕಾಣುವುದು ಕೇವಲ ಮೇಲ್ವರ್ಗದ ಮನೆತನಗಳು, ಅಲ್ಲಿಯ ಕೋಸಂಬರಿ, ಪುಳಿಯೋಗರೆ, ಸಂಪ್ರದಾಯದ ಚೌಕಟ್ಟು ಮೀರದ ಕಥಾವಸ್ತುಗಳೇ ಹಬ್ಬಿಕೊಂಡಿರುವಾಗ ಗೀತಾನಾಗಭೂಷಣ್, ಬಿ.ಬಿ.ಲಲಿತಾನಾಯಕ್, ಕೆಳವರ್ಗದ ಬದುಕಿನ ಬಗೆಗಿನ ಬರಹಗಳು ಸಿಕ್ಕಿರುವುದು ಅಪರೂಪವೆಂದೇ ಹೇಳಬೇಕು. ಹಿಂದುಳಿದ, ಗ್ರಾಮೀಣ ಕೆಲವರ್ಗಗಳ ಗಂಡಸರ ಬದುಕು ಸಂವೇದನೆಯೇ ಅಧೋಲೋಕವೆನ್ನುವಂತಿದೆ. ಇನ್ನು ಆ ವರ್ಗಗಳ ಹೆಣ್ಣು ಸಂವೇದನೆ ಪಾತಾಳ ಲೋಕವೇ ಆಗಿದೆ. ಇದೇ ಭಾರತೀಯ ಸಾಮಾಜಿಕತೆಯಲ್ಲಿ ವಾಸ್ತವ (ಒರಿಜಿನಾಲಿಟಿ) ಬದುಕನ್ನು ಬರವಣಿಗೆಯಲ್ಲಿ ತರುವಂತೆ, ಯಾವುದೇ ಶಕ್ತಿ ಇಲ್ಲವೇ ಇಲ್ಲವೆಂದರೂ ನಿಜವೇ. ಇಂತಹ ಪರಿಸ್ಥಿತಿಯಲ್ಲಿ ವಿರಳವಾಗಿ ಬರುತ್ತಿರುವ ಗೀತಾನಾಗಭೂಷಣ್, ಬಿ.ಟಿ. ಲಲಿತಾ ನಾಯಕ್, ಸಾರಾ ಅಬೂಬಕರ್, ಮಲ್ಲಿಕಾ ಘಂಟಿ, ವಿಜಯ ಸಬರದ ಒಂದಷ್ಟು ಪ್ರಯತ್ನ ನಡೆಸುತ್ತಿರುವರು ಆಶಾದಾಯಕ. ತಾವು ಹೇಳಿದಂತೆ ಕೆಳವರ್ಗದ ಮಹಿಳೆಯರಿಗೆ ಶಿಕ್ಷಣ ಇನ್ನೂ ಗಂಭೀರವಾಗಿ ತಲುಪದಿರುವ ಈ ಹೊತ್ತಿನಲ್ಲಿ ಇದೊಂದು ಸವಾಲೇ ಸರಿ'.

(ಗೀತಾ ಡಿ.ಸಿ.ಯವರಿಗೆ ಬರೆದ ಪತ್ರದಿಂದ)

- ಉತ್ತನೂರು ರಾಜಮ್ಮ ವಿ.ಶೆಟ್ಟಿ.

ಮಾನಸ ನಿಮ್ಮ ಪತ್ರಿಕೆ. ಉಳಿಸಿ, ಬೆಳೆಸಬೇಕಾದವರು ನೀವು. ನಿಮ್ಮ ಚಂದಾ ಮುಗಿದಿದ್ದರೆ ನವೀಕರಿಸಿ. ಮಹಿಳೆಯರ ಬಗೆಗಿನ ವೈಚಾರಿಕ ಲೇಖನ, ಅನುಭವಗಳು, ಕವನ, ಕಥೆ ಕಳುಹಿಸಿಕೊಡಿ. ನಿಮ್ಮ ಸಹಕಾರ-ಸಲಹೆಗಳು ಮಾನಸಕ್ಕೆ - ಮಾನಸದ ಬೆಳವಣಿಗೆಗೆ ಅಗತ್ಯವಾಗಿವೆ.

ಸಂ. ಮಂ.

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 100 ರೂ**

**ಸಂಸ್ಥೆಗಳಿಗೆ : 150 ರೂ**

ಸಂ.ಮಂಡಳಿ

REGD No. : CPMG/KA/BGE/289/2003 - 05

BOOK-POST
PRINTED MATTER



ವಿಳಾಸ :

**ಮಾನಸ**

ಪಂಚಾಯಿತಿ ರಸ್ತೆ, ಕಾಡುಗೋಡಿ

ಬೆಂಗಳೂರು - 560 067